ಭಾರತದ

# ಸಾಹಿತ್ಯ ಮತ್ತು ಕಲೆಗಳು

ವಿಷ್ನೇಶ್ವರ ಶರ್ಮಾ, ತದ್ದಲಸೆ, ಸಿರಸಿ.

0—6—0

ಅಂತರಂಗ ಕಾರ್ಯಾಲಯ, ಉಡುಪಿ.

ಭಾರತದ

# ಸಾಹಿತ್ಯ ಮತ್ತು ಕಲೆಗಳು

ವಿಘ್ನೇಶ್ವರ ಶರ್ಮಾ, ತದ್ದಲಸೆ, ಸಿರಸಿ
"ಸಾಧನ" ಸಹಸಂಪಾದಕರು.





ಅಂತರಂಗ ಕಾರ್ಯಾಲಯ, ಉಡುಪಿ.

# ಮೊದಲ್ಮಾತು

ಭಾರತದ ಸಾಹಿತ್ಯ ಕಲೆಗಳ ವಿಷಯವಾಗಿ ಬರೆಯುವ ಅಭಿಲಾಷೆ ಯಿದ್ದರೂ ಅದನ್ನು ಒಟ್ಟಾಗಿ ಜನತೆಯ ಮುಂದಿಡಲು ಅನಾನುಕೂಲತೆಯಾ ಗಿತ್ತು. ಅದರಿಂದ ಬಿಡಿಬಿಡಿಯಾಗಿ ಬರೆದು ಕೆಲವು ಪ್ರತಿಕೆಗಳಲ್ಲಿ ಪ್ರಕಟ ವಾಯಿತು.

"ಅಂತರಂಗ"ದ ಈ ಹೊಸ ಉದ್ಯಮ ಇದನ್ನು ಒಂದುಗೂಡಿಸಿ ಜನ ತೆಯ ಕರಕಮಲದಲ್ಲಿ ಅರ್ಪಿಸಲು ಪ್ರೋತ್ಸಾಹಿಸಿದ್ದಕ್ಕಾಗಿ ಅವರಿಗೆ ಕೃತಜ್ಞತೆ.

ಅಗಮ್ಯವಾದ ಭಾರತದ ಸಾಹಿತ್ಯ ಕಲೆಗಳ ವಿಷಯವಾಗಿ ಇದು ಪೂರ್ಣ ವಿಮರ್ಶೆಯಾಗಿರದೆ ಪರಿಚಯಾತ್ಮಕ ಬರಹವೆನ್ನಬಹುದು. ಇದರಿಂದ ಓದುಗರಿಗೆ ಸಾಹಿತ್ಯ ಕಲೆಗಳ ಬಗ್ಗೆ ಕೆಲವಾದರೂ ಪರಿಚಯವಾಗಿ ಪ್ರಯೋಜನವಾದರೆ ನನ್ನ ಲೆಕ್ಕಣಿಕೆಗೆ ಅದೊಂದು ಮಹದಾನಂದ.

"ಸಾಧನ"
ಕಾರ್ಯಾಲಯ



ವಿಶ್ವೇಶ್ವರ ಶರ್ಮಾ,
ತದ್ದಲಸೆ.

---

ಸಂಪಾದಕ ಮತ್ತು ಪ್ರಕಾಶಕ—
**ಕೆ. ಹೊನ್ನಯ್ಯ ಶೆಟ್ಟಿ,**
ಅಂತರಂಗ ಕಾರ್ಯಾಲಯ,
ಉಡುಪಿ.



ವಿಕ್ರಯಾಧಿಕಾರಿಗಳು—
**ನವಭಾರತ ಪುಸ್ತಕ ಭಂಡಾರ,**
ಉಡುಪಿ.

ಮುದ್ರಕರು—
**ಕೆ. ಎಚ್. ಶೆಟ್ಟಿ,**
ನವಯುಗ ಪ್ರೆಸ್,
ಉಡುಪಿ.

# ಭಾರತದ
# ಸಾಹಿತ್ಯ ಮತ್ತು ಕಲೆಗಳು

## ೧

ವಿಶ್ವಜೀವನದಲ್ಲಿ ಭಾರತದ ಜೀವನವು ಯುಗಯುಗಾಂತರಗಳಿಂದಲೂ ವೈಶಿಷ್ಟ್ಯಪೂರ್ಣವಾಗುತ್ತಲೇ ಬಂದಿದೆ. ಯಾವ ದೇಶದಲ್ಲೂ-ಯಾವ ಜನಾಂಗದಲ್ಲೂ ಕಾಣದಂಥ ಅಪೂರ್ವನಾದ ಸಂಸ್ಕೃತಿ-ಸಭ್ಯತೆ—ಸ್ವಭಾವಗಳು--ಭಾರತದಲ್ಲಿ ಅಚ್ಚಳಿಯದೇ ಉಜ್ವಲವಾಗಿ ಬೆಳೆಯುತ್ತ—ಬೆಳಗುತ್ತ ಬಂದಿವೆ. ಇಂದಿನ ಗಾಂಧೀಜೀಯವರ ತಾತ್ವಿಕ ಸೃಷ್ಟಿಯಿಂದಂತೂ ಭಾರತದ ಕೀರ್ತಿ ಶಿಖರಕ್ಕೆ ತಲ್ಪಿದೆ. ಸಮಸ್ತ ಮಾನವ ಜನಾಂಗದ ದೃಷ್ಟಿಯೇ ಭಾರತದ ಆದರ್ಶದತ್ತ ಹೊರಳಿದೆ. ಮಂಗಲ ಮಯವಾದ ಜೀವನವೇ ಭಾರತೀಯರದೆಂದು ಹೇಳ ಹತ್ತಿದ್ದಾರೆ. ರಾಷ್ಟ್ರದ ಪಾರತಂತ್ರ್ಯದ ಆಳ್ವಿಕೆಯನ್ನು ಸಂಪೂರ್ಣವಾಗಿ ಪರಾಭವಗೊಳಿಸಿ ಯುದ್ಧವಿಲ್ಲದೆಯೇ ಸ್ವಾತಂತ್ರ್ಯದ ವಿಜಯವನ್ನು ಸಂಪಾದಿಸಿಕೊಳ್ಳುವದೆಂದರೆ ಅಸಾಮಾನ್ಯ ಸಾಹಸವೆಂದು ವಿದೇಶದ ಪ್ರಖ್ಯಾತ ರಾಜಕಾರಣಿಗಳು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಇಲ್ಲಿಯ ಸಾಹಿತ್ಯವೇ ಕಾರಣವಾಗಿದೆ. ಇದರಿಂದಲೇ ಭಾರತಕ್ಕೆ ಇಷ್ಟೊಂದು ಮೇಲ್ಮೆ ದೊರಕುತ್ತಲಿದೆ.

ಒಂದು ರಾಷ್ಟ್ರ—ಅಥವಾ ಒಂದು ಜನಾಂಗದ ಸ್ವರೂಪವನ್ನು ಅಲ್ಲಿಯ ಸಾಹಿತ್ಯದಿಂದಲೇ ಪೂರ್ಣವಾಗಿ ನಿರ್ಣಯಿಸಿಬಿಡಬಹುದು. ಜೀವನದ ಪ್ರತೀಕ ಸಾಹಿತ್ಯ. ಸಾಹಿತ್ಯವು ಸುಂದರವಾಗಿ ಸಮೃದ್ಧವಾಗಿ ಬೆಳೆದಂತೆಲ್ಲ ಅಲ್ಲಿಯ ಜನಜೀವನವೂ ಸುಂದರ ಸಮೃದ್ಧವಾಗುವದು. ಸಾಹಿತ್ಯವಿಲ್ಲದಿದ್ದರೂ ಹಾಗೆಯೇ ಸಂತಸವಿಲ್ಲ. ಪ್ರಗತಿಯಿಲ್ಲ. ಜೀವನಕ್ಕೆ ಸಾಹಿತ್ಯ ಇಷ್ಟೊಂದು ಪೋಷಕವೆನಿಸಿ. ಇವುಗಳೊಳಗೆ ಬಿಡಿಸಲಾರದಷ್ಟು ನಿಕಟವಾದ ಸಂಬಂಧ ಹೆಣೆದುಕೊಂಡಿದೆ. ಬೆಳೆದು ಕೊಂಡಿದೆ.

ಭಾರತದಲ್ಲಿ ಪ್ರಾಚೀನ ಸಾಹಿತ್ಯಗಳಾದ ವೇದೋಪನಿಷತ್ತುಗಳು ಅನಾದಿಕಾಲದಿಂದಲೂ ಸತ್ಯ—ಶಾಂತಿ—ವಿವೇಕ—ವಿಜ್ಞಾನ ಮುಂತಾದ

ಮಾನವ್ಯದ ಧರ್ಮಗಳನ್ನು ಬೋಧಿಸುತ್ತ ನಿಂತಿರುವ ಜೀವಂತ ಅಮರ ಕೃತಿಗಳು. ಅಕ್ಷಯ ಜ್ಞಾನ ಭಂಡಾರಗಳು. ಇವುಗಳಲ್ಲಿ ಜೀವನ ವಿಕಾಸಕ್ಕೆ ಬೇಕಾದಷ್ಟು ವಿಚಾರಗಳಿವೆ. ಇವಲ್ಲದೇ ನಮ್ಮ ಜೀವನಕ್ಕೆ ರಸದೂಟವನ್ನುಣಿಸುವ ಸುರಸ ಪುರಾಣ ಸಾಹಿತ್ಯಗಳು ಇಲ್ಲಿ ರಾಶಿ ರಾಶಿಯಾಗಿ ಶೋಭಿಸುತ್ತಿವೆ.

ಇಷ್ಟು ವಿಶಾಲವಾಗಿ ಬೆಳೆದ ಈ ಸಾಹಿತ್ಯಗಳೇ ಇಂದು ಬೆಳೆಯುತ್ತಿರುವ ಪ್ರಾದೇಶಿಕ ಪಾರಿಭಾಷಿಕ ಸಾಹಿತ್ಯಗಳಿಗೆಲ್ಲಾ ತಳಹದಿಯಾಯಿತು. ಅಲ್ಲಿಯ ವಿಚಾರಗಳೇ ಇಲ್ಲಿಯೂ ಸೃಷ್ಟಿಯಾಗ ತೊಡಗಿತು. ಜಡ ಬುದ್ಧಿಯನ್ನು ಸಹಾ ಹದಗೊಳಿಸಿ ವಿನೋದದಿಂದ ವಿಚಾರಗಳನ್ನು ಒದಗಿಸುವಂಥ ಕಲಾಸಾಹಿತ್ಯಗಳನ್ನೂ ಇವುಗಳಿಂದಲೇ ಕಂಡುಕೊಳ್ಳಲಾಯಿತು.

ಭಾರತದ ಸಾಹಿತ್ಯ ಸೌಂದರ್ಯವನ್ನು ಬಣ್ಣಿಸುವ ಅವಸರದಲ್ಲಿ ಇತರ ದೇಶಗಳ ಸಾಹಿತ್ಯವನ್ನು ಅವಲೋಕಿಸದೇ ಇರುವದು ಸೂಕ್ತವಲ್ಲ. ಪೌರಸ್ತ್ಯ ಮತ್ತು ಪಾಶ್ಚಿಮಾತ್ಯರ ಸಾಹಿತ್ಯ ಹೆಸರಿಗೆ ಸರಿಯಾಗಿ ಪೂರ್ವಪಶ್ಚಿಮದಷ್ಟೇ ಅಭ್ಯಂತರವಿದೆ. ಭಾರತದ ಸಾಹಿತ್ಯ ಶಾಂತಿ ಪ್ರಿಯವಾದರೆ ಪಾಶ್ಚಿಮಾತ್ಯರದು ಕ್ರಾಂತಿ ಪ್ರಿಯವಾಗಿದೆ. ಇದರಿಂದ ಪಾಶ್ಚಿಮಾತ್ಯರಲ್ಲಿ ಶಾಂತಿಯು ಬರೇ ಮಾತಿನದಾಗಿ ದಿನಕ್ಕೊಂದು ಯುದ್ಧವಾಗಿ – ನಿಮಿಷ ನಿಮಿಷಕ್ಕೂ ಅಶಾಂತಿಯ ಪ್ರಕ್ಷುಬ್ಧ ವಾತಾವರಣವು ಬೆಳೆಯುತ್ತಲಿದೆ. ಇಂದೊಂದು ಸರಕಾರವಾದರೆ ನಾಳೆ ಮತ್ತೊಂದು – ನಾಡದು ಇನ್ನೊಂದು ಹೀಗೆ ಅನಿಶ್ಚಿತ ಧೋರಣೆಯಿಂದ ಜನಾಂಗಕ್ಕೆ ಶಾಂತಿಯೆನ್ನುವದು ಕನಸಿನ ಮಾತಾಗಿದೆ. ಕನ್ನಡಿಯ ಇಡುಗಂಟಾಗಿದೆ.

ಮೇಲಿನಿಂದ ನೋಡಿದರೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಭೌತಿಕ ಸಾಹಿತ್ಯದ ವಿಕಾಸವಾಗಿ ಯಾಂತ್ರಿಕ ಉಪಕರಣಗಳು ಎಣಿಕೆ ಇಲ್ಲದಷ್ಟು ಬೆಳೆದಿವೆಯೇನೋ ನಿಜ! ಇದರಿಂದಲೂ ಮಾನವನ ಪರಿಶೋಧನೆಗೆ ಬೆಲೆ ಕೊಡಬಹುದೇ ಹೊರತು ಇಷ್ಟು ಅತಿಯಾಗಿ ಬೆಳದು ಹೆಜ್ಜೆ ಹೆಜ್ಜೆಗೂ ಯಾಂತ್ರಿಕ ಉಪಕರಣವನ್ನೇ ಬಳಸಹತ್ತಿದರೆ ಮಾನವನ

ಶಕ್ತಿ ನಿರ್ಜೀವಿಯಾಗುವುದರಲ್ಲಿ ಸಂಶಯವಿಲ್ಲ. ಪ್ರತ್ಯಕ್ಷ ಪರಿಣಾಮದ ಪ್ರಭಾವಕ್ಕಾಗಿ ಭೌತಿಕ ಸಾಹಿತ್ಯಕ್ಕೆ ನಾವೆಷ್ಟು ಪ್ರಾಶಸ್ತ್ಯಕೊಟ್ಟರೂ ಅದು ಮಾನವನ ಜೀವನಕ್ಕೆ ಬೇಕಾದ ಯಾವ ನಿಶಾಂತ ಸಮಾಧಾನ ವನ್ನೂ ಹೇಳುವುದಿಲ್ಲ. ಪರಿಶೋಧನೆಯ ಹುಚ್ಚು ಹಿಡಿಸಿ ತನ್ನ ಶೋಧನೆಯ ಕ್ಷೇತ್ರವನ್ನು ಮಾತ್ರ ವಿಸ್ತರಿಸುತ್ತಲಿದೆ. ಇದರ ಪ್ರಸರಣ ದಿಂದ ಜೀವಿತಕ್ಕೆ ಬೇಕಾದ ಸಾಮಗ್ರಿಗಳು ಹೆಚ್ಚೆಚ್ಚು ದೊರಕಿದವೇ ಹೊರತು ಜೀವನದ ಉದ್ದೇಶಕ್ಕೆ ಬೇಕಾದ ಸಿದ್ಧಿ ಸಾಧನೆಯ ಆಧ್ಯಾತ್ಮಿಕ ಸಾಹಿತ್ಯ ಬೆಳೆಯಲಿಲ್ಲ. ತೋರಿಕೆಗಾಗಿ ಭೌತಿಕ ಉಪಕರಣವೇ ಜೀವನಕ್ಕೆ ಅವಶ್ಯಕವೆನಿಸಬಹುದು. ಆದರೆ ಆಧ್ಯಾತ್ಮಿಕತೆಯ ಮುಂದೆ ಭೌತಿಕವು ಕಃಪದಾರ್ಥ. ಯಾವ ಆಧ್ಯಾತ್ಮಿಕ ಸಾಹಿತಿಯು ತನ್ನ ಸಾಧನೆಯ ಬಲದಿಂದ ವಿಶ್ವವೆಲ್ಲವನ್ನೂ ಅಂತ ದೃಷ್ಟಿಯಾಗಿ ನೋಡಬಲ್ಲನೋ ಅದೇ ಭೌತಿಕ ಸಾಹಿತಿಯು ಸ್ವಲ್ಪೇ ದೂರದಲ್ಲಿದ್ದ ವಸ್ತುವನ್ನು ಸಹಾ ನೋಡಲು ದುರ್ಬೀನಿನಂತಹ ಯಾಂತ್ರಿಕಕ್ಕೆ ಶರಣು ಹೋಗಬೇಕಾಗು ವದು ಆಧ್ಯಾತ್ಮಿಕ ಸಾಹಿತಿಯು ನಿಮಿಷದಲ್ಲಿ ವಿಶ್ವವೆಲ್ಲವನ್ನೂ ಸಂಚರಿಸ ಬಲ್ಲನಾದರೆ ಭೌತಿಕ ಸಾಹಿತಿಯು ವರುಷಗಟ್ಟಲೇ ಪ್ರಯತ್ನಿಸ ಬೇಕಾಗುವದು.

ಜರ್ಮನಿಯಲ್ಲಿ ಭೌತಿಕ ಸಾಹಿತ್ಯದ ಬೆಳವಣಿಗೆಯಾದಂತೆಲ್ಲ ದಿನಕ್ಕೊಂದು ಹೊಸ ಹೊಸ ಯಾಂತ್ರಿಕ ಸಾಮಾಗ್ರಿ ಬೆಳಕಿಗೆ ಬಂದಿತು. ಮಾನವ ಜೀವಿತದ ಸೌಕರ್ಯಕ್ಕಾಗಿ ಶೋಧ ನಡೆದಂತೆ ಮಾನವನ ನಾಶಕ್ಕಾಗಿಯೂ ಯುದ್ಧೋಪಕರಣಗಳು ಸಂಶೋಧನೆಯಲ್ಲಿ ದೊರಕಿ ದವು. ಹಿಟ್ಲರನ ಕಾಲವಂತೂ ಇಂಥ ಯುದ್ಧೋಪಕರಣದಿಂದ ಜಗತ್ತೇ ನಡುಗಿತು. ವಿಶ್ವವನ್ನೇ ಆಕ್ರಮಿಸಿ ಶಾಂತಿಸ್ಥಾಪನೆ ಮಾಡುವುದಾಗಿ ಜರ್ಮನಿಯು ಹುಡುಕಿತು. ಆದರೆ ವಿಶ್ವದ ಮಾತಿರಲಿ! ಸ್ವತಃ ಜರ್ಮನಿ ಗಾದರೂ ಶಾಂತಿಯಾಯಿತೇ? ಪ್ರಗತಿ ದೊರಕಿತೇ? ಪತನವೇ ಕೊನೆಗೆ ಗತಿಯಾಯಿತು.

ಮೊನ್ನೆ ಮೊನ್ನೆ ಅಮೇರಿಕೆಯು ಪ್ರಳಯಂದಂಥ ಅಟಂ ಶಕ್ತಿಯನ್ನು

ಕಂಡುಹಿಡಿದಿದೆ. ಒಂದೆರಡು ಪ್ರಯೋಗ ನಡಿಸಿ ಮೃತ್ಯುವಿನೊಡನೆ ಚಿನ್ನಾಟವಾಡುವ ಆ ಭಯಾನಕ ರೂಪವನ್ನು ಕಂಡು ಸ್ವತಃ ಅಮೇರಿಕೆಗೂ ಭಯವಾಗಿದೆ. ರೂಪವನ್ನು ಕಂಡು ಹಿಡಿದ ವೈಜ್ಞಾನಿಕನಂತೂ ಸಾಕಿನ್ನು ಈ ಸಂಶೋಧನೆಯೆಂದು ಅದರ ಕ್ರಿಯೆಯನ್ನು ತಡೆಯುವದಕ್ಕಾಗಿ ಪ್ರತಿಕ್ರಿಯೆಯನ್ನು ಹುಡುಕುತ್ತಿರುವನಂತೆ. ಇದೆಂತಹ ಹುಚ್ಚಾಟ!

ಆದರೆ ಭೌತಿಕ ಸಾಹಿತ್ಯವು ಇದರಿಂದ ತುಚ್ಛವೆಂತಾಗಲೀ-ತ್ಯಾಜ್ಯವೆಂತಾಗಲೀ ಅನ್ನಲು ಬರುವದಿಲ್ಲ. ಅದರ ವ್ಯಾಪ್ತಿಯು ನಮ್ಮ ಜೀವಿತದ ಪೋಷಣೆಗೆ ಮಾತ್ರವಿರಲಿ! ಆದರೆ ಇದರ ಪ್ರಭಾವದಿಂದ ಜೀವನಕ್ಕೆ ಬೇಕಾದ ಆಧ್ಯಾತ್ಮಿಕತೆಯನ್ನು ಮಾತ್ರ ಮರೆಯದೇ ಇರುವಂತಾದರೆ ಯುಕ್ತ!

ಅಮೇರಿಕೆಯ ಚಿಕಾಗೋ ಪರಿಷತ್ತಿನಲ್ಲಿ ಸ್ವಾಮಿ ವಿವೇಕಾನಂದರು ಉಜ್ವಲವಾದ ಭಾರತದ ಸಾಹಿತ್ಯ-ಸಂಸ್ಕೃತಿಗಳ ಸ್ವರೂಪವನ್ನು ತೋರಿಸಿದ್ದಾರೆ. ವಿಶ್ವದ ಎಲ್ಲ ಸಂಸ್ಕೃತಿ ನೀತಿಗಳಿಗೂ ಭಾರತದ್ದೇ ಹೆಚ್ಚಿನದೆಂದು ಖಚಿತಪಡಿಸಿದ್ದಾರೆ.

ನಮ್ಮ ಸಾಹಿತ್ಯದಲ್ಲಿ ದೊರಕುವಂಥ ತತ್ವಜ್ಞಾನ ಯಾವ ದೇಶೀಯ ಸಾಹಿತ್ಯದಲ್ಲೂ ದೊರಕಲಾರದು. ಧರ್ಮ ದೇವರುಗಳ ವಿಷಯವಾಗಿ ಸುಂದರವಾದ ವಿಚಾರಗಳಿಂದ ಮಾನವನ ಮನಸ್ಸನ್ನು ಪ್ರಸನ್ನೀಕರಿಸುವ ಅಪೂರ್ವ ಶಕ್ತಿ ಈ ಸಾಹಿತ್ಯದಲ್ಲಿದೆ" ರಶಿಯಾದಲ್ಲಿ ಇಂಥ ಆಸ್ತಿಕ ಭಾವನೆಗೆ ಅವಕಾಶವಿಲ್ಲ. ಅಲ್ಲಿಯ ದೊಡ್ಡ ದೊಡ್ಡ ಮಂದಿರಗಳ ಮೇಲೆ "ಧರ್ಮದೇವರುಗಳು ಜನರಿಗೆ ಅಫೀಮು" ಎಂದು ಬರೆದಿಟ್ಟು ನಾಸ್ತಿಕತೆಯನ್ನು ಉದ್ರೇಕಿಸುವ ಸಾಹಸ--ಹವ್ಯಾಸವೂ ನಡೆದಿತ್ತಂತೆ. ಆದರೆ ಮೊನ್ನೆ ನಡೆದ ಜರ್ಮನಿಯ ಯುದ್ಧದಲ್ಲಿ ರಶಿಯಾವು ಸೋಲುವ ಪ್ರಸಂಗ ಬಂದಾಗ ಅಲ್ಲಿಯ ಜನರೆಲ್ಲ ಈಶ್ವರನಲ್ಲಿ ಅಭಯ ಬೇಡಿಕೊಂಡರಂತೆ. ಪರಿಣಾಮವಾಗಿ ರಶಿಯಾಕ್ಕೆ ವಿಜಯ ದೊರಕಿತು. ಆಸ್ತಿಕ ಭಾವನೆಯೂ ಮೂಡಹತ್ತಿತು.

ಪ್ರಾಚೀನದಲ್ಲಿ ಸಾಹಿತ್ಯವು ಬಾಯಿಂದ ಬಾಯಿಗೆ ಹೇಳಿಸಿಕೊಳ್ಳುವ

ರೂಢಿಯಾಗಿ ಅದು ಮಾನವನ ಮಿದುಳಿನಲ್ಲಿ ಮಾತ್ರವೇ ಆಶ್ರಯ ಹೊಂದಬೇಕಾಗಿತ್ತು. ನಂತರ ಲಿಪಿ ಸಂಶೋಧನೆ-ಮುದ್ರಣ-ಇವೆಲ್ಲವು ಗಳಿಂದ ಸಾಹಿತ್ಯ ಬೆಳೆಯಹತ್ತಿತು.

ಆದರೆ ಕೆಲವು ಕಾಲದ ಹಿಂದೆ ಸಾಹಿತ್ಯ ಬೆಳೆದಿದ್ದರೂ ಅದರ ಬಳಕೆಯು ಮಾತ್ರ ಕಡಿಮೆಯಾಗಿ ವಿಚಾರಗಳಿಗೆಲ್ಲಾ ಮಿದುಳಿನ ಆಶ್ರಯ ತಪ್ಪಿ ಪುಸ್ತಕವನ್ನವಲಂಭಿಸಬೇಕಾಯಿತು. ಸಾಹಿತ್ಯವು ಬರೇ ಮಾತಿನ ಜಾಲವಾಗಿ ಉಳಿಯಿತು. ಇದರಿಂದ ಜನಾಂಗದಲ್ಲಿ ವಿವೇಕ ವಿಜ್ಞಾನಗಳು ಮಾಯವಾಗ ಹತ್ತಿ ಅಜ್ಞಾನ ಅವಿವೇಕಗಳು ಮೈಗೂಡ ಹತ್ತಿತು. ಇದರಿಂದ ಭಾರತದಲ್ಲಿ ಅರಾಜಕತೆಯಾಗಿ ಇಲ್ಲಿಯ ಆಳ್ವಿಕೆಯು ವಿದೇಶೀಯರ ಕೈಗೆ ದೊರಕಿತು. ಇಲ್ಲಿಯ ಜನಜೀವನದ ಅವನತಿಗೆ ಪ್ರಾರಂಭವಾಯಿತು.

ವಿದೇಶೀಯರ ಆಳ್ವಿಕೆಯಲ್ಲಿ ಶಿಕ್ಷಣವೂ ವಿದೇಶೀಯರದೇ ನಡೆಯಿತು. ಆದರಿಂದ ಇಲ್ಲಿಯ ಉದಾತ್ತ ಸಾಹಿತ್ಯಗಳು ಮೂಲೆ ಗುಂಪಾಗಿ ಕುಳಿತುಕೊಳ್ಳಬೇಕಾಯಿತು. ತಮ್ಮ ಆಳ್ವಿಕೆಯನ್ನೇ ಭದ್ರವಾಗಿರಿಸಲು-ಇಲ್ಲಿಯ ಜನಾಂಗಕ್ಕೆ ಇಲ್ಲಿಯ ಸಾಹಿತ್ಯದ ಮೇಲೆ ಕಲುಷಿತ ಭಾವನೆಯನ್ನು ಹುಟ್ಟಿಸಲು ಎಷ್ಟೋ ಹಿಂಸಾಚಾರಗಳೂ ನಡೆದವು. ಇದರಿಂದ ಕೆಲವು ಕಾಲ ವಿದೇಶೀಯರ ಆಳ್ವಿಕೆಯಾಗಿ ಇಲ್ಲಿಯ ಸಾಹಿತ್ಯ ಸಂಪತ್ತುಗಳೆಷ್ಟೋ ಪರಾಧೀನವಾಯಿತು. ತೋಫು-ಮಶಿನ್ ಗನ್ನುಗಳಿಂದಲೂ ಅಸಾಧ್ಯವಾದ ಇವರ ಮನೋಮಯ ವಿಜ್ಞಾನಮಯ ಸಾಮ್ರಾಜ್ಯದ ಮೇಲೂ ಕ್ಷುದ್ರ ತಾಮಸೀ ಪ್ರವೃತ್ತಿಯನ್ನು ಹುಟ್ಟಿಸುವ ಸಾಹಸಪ್ರಯತ್ನಗಳೂ ನಡೆಯಿತು. ಆದರೆ ಇಲ್ಲಿಯ ಜನಾಂಗದ ರಕ್ತದ ಪ್ರತಿಯೊಂದು ಬಿಂದುವಿನಲ್ಲೂ ಪೋಣಿಸಿಕೊಂಡಿದ್ದ ಸ್ವದೇಶ ಪ್ರೀತಿ—ಸ್ವಸಂಸ್ಕೃತಿಯ ರಕ್ಷಣೆಯ ನಿಷ್ಟೆ ಇವು ಮಾತ್ರ ಕ್ಷಯವಾಗಲಿಲ್ಲ. ಜಾಗ್ರತವಾಯಿತು. ವಿದೇಶೀಯರೊಡನೆ ಸ್ವಾತಂತ್ರ್ಯದ ಹೋರಾಟಕ್ಕೂ ಆರಂಭವಾಯಿತು. ಭೌತಿಕ ಯುದ್ಧೋಪಕರಣಗಳಿಲ್ಲದ ಭಾರತವು ತನ್ನ ಆಧ್ಯಾತ್ಮಿಕ ಸಾಹಿತ್ಯದ ಪುನರುಜ್ಜೀವನದಿಂದ ವಿಜಯವನ್ನು ಸಂಪಾದಿಸಲೂ ಸಮರ್ಥವಾಯಿತು.

ಈ ಸ್ವಾತಂತ್ರ್ಯ ಸಂಗ್ರಾಮದ ನಾಯಕರಾಗಿದ್ದ ಪೂಜ್ಯ ಗಾಂಧೀಜೀಯವರು ನಮ್ಮ ಸಾಹಿತ್ಯದ ಬಗ್ಗೆ ಹೇಳುವಾಗ "ಗೀತೆಯಂಥ ಸಾಹಿತ್ಯ ನನಗೆ ದೊರೆಯದಿದ್ದರೆ ನಾನು ನಿಜವಾಗಿಯೂ ಮಾನವನಾಗುತ್ತಿದ್ದಿಲ್ಲ. ಆದರಿಂದ ಗೀತೆಯನ್ನು – ನನ್ನ ಜೀವನವನ್ನು ಸುಂದರವಾಗಿ ಪೋಷಿಸಿದ ಪವಿತ್ರ ಆಹಾರವೆಂದು ಭಾವಿಸುತ್ತೇನೆ. ಒಂದು ಕ್ಷಣವಾದರೂ ಗೀತೆಯ ವಿಚಾರವನ್ನು ಬಿಟ್ಟಿರಲು ಸಾಧ್ಯವಾಗುವದಿಲ್ಲ" ಎಂದಿದ್ದಾರೆ. ಅಂತಿರುವಾಗ ಗಾಂಧೀಜೀಯವರಂಥ ಸತ್ವಶಾಲಿಗಳು ತತ್ವನಿಷ್ಠರಾಗಿ ನಡೆಸಿದ ಈ ಸಾಹಿತ್ಯದ ಉಪಾಸನೆಯಿಂದಲೇ ಭಾರತದ ಬಂಧಮುಕ್ತತೆಯಾಗಿದೆಯೆಂದು ನಿಃಸಂದೇಹವಾಗಿ ಊಹಿಸಬಹುದು.

ರಾಮಕೃಷ್ಣರಂಥ ವಿಭೂತಿ ಪುರುಷರು ನಮ್ಮ ಭಾರತದಲ್ಲೇ ಹುಟ್ಟಿಬೆಳೆದು ಇಲ್ಲಿಯ ರಾಷ್ಟ್ರ ಜೀವನವನ್ನು ವೈಭವದಿಂದ ಬೆಳಗಿಸಿದ ದ್ಯೋತಕವಾಗಿ ನಮ್ಮಲ್ಲಿಯೂ ಇಂದು ರಾಮರಾಜ್ಯದ ಕನಸು ಸೃಷ್ಟಿಯಾಗುತ್ತಲಿದೆ. ಅಂದು ಆ ಮಹಾತ್ಮರು ನಾಡ ಜನತೆಗಾಗಿ ಬೋಧಿಸಿದ "ಜೀವನವು ನೈತಿಕ ಶಕ್ತಿಯಿಂದ ಪೂರ್ಣವಾಗಿರಬೇಕು. ದೈವಿಕ ಭಾವನೆಯಿಂದ ಸತ್ಯ—ಶಾಂತಿ— ಅಹಿಂಸೆಗಳಿಂದ ಸಮೃದ್ಧವಾಗಿ ಬೆಳಗಬೇಕು. ಕರ್ತವ್ಯನಿಷ್ಠೆ ಸಾಧನೆಗಳಿಂದ ಮಾನವನು ಅಜೇಯನಾಗಬೇಕು" ಎಂದು ಹೇಳಿದಂಥ ಪ್ರಚೋದಕ ಮಾತುಗಳೇ ಭಾರತದ ಸಾಹಿತ್ಯ ಭಂಡಾರದಲ್ಲಿ ಉಜ್ವಲವಾಗಿ ಅಮೋಘ ರತ್ನವಾಗಿ ಬೆಳಗಿ "ಗೀತೆ" ಯಂಥ ಸಾಹಿತ್ಯ ಬೇಕು ಎಂದು ಹೇಳಿಸಿಕೊಂಡಿತು.

ಆದರೆ ಈ ರಾಮರಾಜ್ಯದ ಕನಸೂ ಈ ಸಾಹಿತ್ಯಗಳನ್ನೇ ಅವಲಂಬಿಸಿದೆ. ಭಾರತೀಯರೆಲ್ಲರೂ ಭಾರತದ ಈ ಓಜಸ್ವಿಯಾದ ಸಾಹಿತ್ಯದ ಉಪಾಸಕರಿಗೆ— ಸಾಹಿತ್ಯದ ವಿಚಾರಗಳಿಂದ ತಮ್ಮ ಜೀವನವನ್ನು ಪರಿಷ್ಕರಿಸಿ ಕೊಳ್ಳಬೇಕು. ಮಾತಿನ ಸಾಹಿತ್ಯ ಮಾಯವಾಗಿ ಕೃತಿಯ ಸಾಹಿತ್ಯವಾಗಬೇಕು. ಅಂದಾಗ ರಾಮರಾಜ್ಯ ದೂರವಿಲ್ಲ. ಕನಸಿನದೂ ಅಲ್ಲ.

ಇಷ್ಟು ಸತ್ವಪೂರ್ಣವಾದ ಸಾಹಿತ್ಯ ನಮ್ಮಲ್ಲಿದ್ದರೂ— ನಮ್ಮಲ್ಲದನ್ನು ಸುಸಂಬದ್ಧವಾಗಿ ಬಳಸಿಕೊಳ್ಳುವ ಸಾಹಸಿಗರು— ತಾಮಸಿಗಳು ತೀರಾ ವಿರಳ. ಅದರಲ್ಲೂ ಭಾರತದ

ಜೀವಾಳವಾದ ಆಧ್ಯಾತ್ಮಿಕ ಸಾಹಿತಿಗಳು ಎಣಿಕೆ ಮಾಡುವಷ್ಟು! ನಮ್ಮನ್ನಗಲಿದ ಗಾಂಧೀಜೀ! ರಮಣ ಮಹರ್ಷಿ, ಪೂಜ್ಯ ಅರವಿಂದರು—ಇವರನ್ನು ಬಿಟ್ಟರೆ ಆಧ್ಯಾತ್ಮಿಕ ಜ್ಯೋತಿಗಳನ್ನು ಕಾಣುವದು ದುಃಸಾಧ್ಯ!

ಸಾಹಿತ್ಯ ಉಪಾಸನೆಯ ಅಭಾವದಿಂದಲೇ ನಮ್ಮಲ್ಲಿಂದು ವಿಷಮ ವಾತಾವರಣ ಬೆಳೆಯಹತ್ತಿದೆ. ಅನ್ನಬಟ್ಟೆಗಳಂಥ ಜೀವಿತದ ಸಮಸ್ಯೆಯೂ ಭೂತಾಕಾರ ಬೆಳೆಯಹತ್ತಿದೆ. ಮಾನವನೂ ತನ್ನ ಕರ್ತವ್ಯದಿಂದ ಚ್ಯುತಿಹೊಂದಿ ಆಲಸ್ಯವಂತನಾಗಹತ್ತಿದ್ದಾನೆ. ಇದಕ್ಕೆ ನಮ್ಮ ಸಾಹಿತ್ಯ.

ಉತ್ತಿಷ್ಠತ! ಜಾಗ್ರತ! ಪ್ರಾಪ್ಯವರಾನ್ನಿಬೋಧತ ಎಂದು ಚೈತನ್ಯಹೀನವಾದ ಹೃದಯದಲ್ಲಿ ನವಚೈತನ್ಯ ತುಂಬಿ ಕರ್ತವ್ಯದ ಹಾದಿಯಲ್ಲಿ ಮುನ್ನಡಿಸಲು ಪ್ರಚೋದಿಸುವದು—ಇದೇ ನಮ್ಮ ಭಾರತದ ಅಮರ ಸಾಹಿತ್ಯದ ಅಮೃತ ವಾಣಿ!

ಇಂಥ ಸಾಹಿತ್ಯಕ್ಕೂ ಜೀವನದ ಸಿದ್ಧಿಗೂ ಇರುವ ಸಂಬಂಧ—ಜೀವನದಲ್ಲಿ ಹಾಸು ಹೊಕ್ಕಾಗಿರುವ ಕಲಾಸಾಹಿತ್ಯ ಇವುಗಳ ವಿಮರ್ಶೆಯನ್ನೂ ಕ್ರಮವಾಗಿ ನೋಡೋಣ!

## ೨ ಜೀವನದ ಸಿದ್ಧಿ ಸಾಧನೆಯಲ್ಲಿ ಸಾಹಿತ್ಯ

"ಜನಜೀವನವು ಯಾವುದರಿಂದ ಬದುಕಿಕೊಂಡಿದೆ? ಎಂಬ ಪ್ರಶ್ನೆಯನ್ನು ಮುಂದಿರಿಸಿಕೊಂಡಾಗ 'ಅನ್ನ'ದಿಂದ' ಎಂದು ಒಮ್ಮೆಲೇ ಉತ್ತರ ಕೊಡುತ್ತೇವೆ. ಹಾಗೆಯೇ ಜೀವನವೂ ಯಾವುದರ ಸಹಾಯದಿಂದ ಸಮೃದ್ಧವಾಗಿ ಬದುಕಿ ಬೆಳೆಯಬಲ್ಲದು. ಎಂದಾಗಲೂ ಸಾಹಿತ್ಯದಿಂದಲೇ ಎಂದು ಧಾರಾಳವಾಗಿ ಹೇಳಬೇಕಾಗುತ್ತದೆ. ಅದನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳಲೂ ಬೇಕಾಗುತ್ತದೆ.

ಶರೀರದ ಅಂಗಾಂಗಗಳು ಪರಿಪುಷ್ಟವಾಗಿ ಬೆಳೆಯುವದು ಸುಪಕ್ವವಾದ ಅನ್ನದರಸದಿಂದ. ಜೀವನವೂ ಸುಂದರವಾಗಿ ವಿಕಾಸಗೊಳ್ಳುವದು ಸತ್ವಯುಕ್ತವಾದ ಸಾಹಿತ್ಯದಿಂದ. ಅನ್ನ ಶರೀರಗಳಿಗೆಷ್ಟು ನಿಕಟವಾದ ಸಂಬಂಧವಿದೆಯೋ? ಹಾಗೆಯೇ ಜೀವನ ಮತ್ತು ಸಾಹಿತ್ಯಗಳೊಳಗೆ

ಬಿಡಿಸಲಾರದಷ್ಟು ಬಾಂಧವ್ಯವಿದೆ. ಅನ್ನದ ಅಭಾವದಿಂದ ಶರೀರವು ಹೇಗೆ ಬದುಕಲಾರದೋ ಸಾಹಿತ್ಯವಿಲ್ಲದಿದ್ದರೂ ಜೀವನ ಬದುಕಲಾರದು ಬದುಕುವದಿಲ್ಲ. ಬಾಹ್ಯದೃಷ್ಟಿಯಿಂದ ಇದರ ಸೂಕ್ಷ್ಮತೆಯನ್ನು ತಿಳಿಯು ವದು ಸುಲಭಸಾಧ್ಯವಾಗದಿದ್ದರೂ "ಅಂಗೈ ನೋಡಲು ಕನ್ನಡಿಬೇಕೇ?" ಎನ್ನುವಂತೆ ಸಾಹಿತ್ಯದ ಗಂಧವೂ ಇಲ್ಲದ ಜೀವನವನ್ನು ನೋಡಿದಾಗ ಇದು ಸ್ಫುಟವಾಗಿ ಅರಿವಾಗುವಂತಿದೆ. ಇಷ್ಟೊಂದು ಮಹತ್ವದ್ದಾದ ಜೀವ ನಾಡಿ ಎನಿಸಿದೆ ಜೀವನಕ್ಕೆ ಸಾಹಿತ್ಯ.

ಸಾಹಿತ್ಯದ ವ್ಯಾಖ್ಯೆಯನ್ನು ಧರ್ಮದ ವ್ಯಾಖ್ಯೆಯಂತೆಯೇ ಅದರ ಉಜ್ವಲವಾದ ಕ್ರಿಯಾಸಿದ್ಧಿಗನುಗುಣವಾಗಿ— ಸರ್ವತೋಮುಖವಾಗಿ ಹೇಳಿದರೂ ಇನ್ನೂ ಅದರ ಪೂರ್ಣತೆಯನ್ನೇ ಬಣ್ಣಿಸುವಂಥ ಸಾಹಸ ಅಸಂಖ್ಯ ಪುರಾಣ ಸಾಹಿತ್ಯಗಳನ್ನು ನಿರ್ಮಿಸಿದ ಮಹರ್ಷಿ ವ್ಯಾಸನಿಗೂ ಬಂದಿಲ್ಲವೋ ಏನೋ? ಒಬ್ಬರಿಗೆ ಸತ್ಯವಾದ ರಮ್ಯವಾದ ಸುರಸವಾಙ್ಮಯವೇ ಸಾಹಿತ್ಯವೆನಿಸಿದರೆ ಇನ್ನೊಬ್ಬರಿಗೆ ಜೀವನವನ್ನು ಸುಖಜೀವನದ ಸತ್ವವನ್ನಾಗಿರಿಸಿ ದಿನದಿನಕ್ಕೂ ಪ್ರಗತಿಯ ರಂಗದಲ್ಲಿ ಓಡಿಸುವಂಥ ಕ್ರಿಯಾಸತ್ವವುಳ್ಳ ಪ್ರಗತಿಶೀಲ ವಾಙ್ಮಯವೇ ಸಾಹಿತ್ಯ. ಸರಿ! ಮತ್ತೊಬ್ಬರಿಗೆ— ಜೀವಿಗಳಿಗೆ ಕ್ಷಣಕ್ಷಣಕ್ಕೂ ಕರ್ತವ್ಯದ ಅರಿವನ್ನು ಹುಟ್ಟಿಸಿ ಮುನ್ನಡಿಸುವಂಥ "ಧಿಯೋಯೋನ ಪ್ರಚೋದಯಾತ" ಪ್ರಚೋದಕ ಶಕ್ತಿಯೇ ಸಾಹಿತ್ಯ ಎನಿಸಿತು. ಇವೆಲ್ಲ ವೇದಾಂತಿಗಳಿಗೆ ಸರಿಯಾಗ ಲಿಲ್ಲ. ಹೇಳಿಯೇ ಬಿಟ್ಟರು. 'ಕಾವ್ಯಮಾನಂದಾಯ" ಯಾವದು ಸಾವುನೋವುಗಳ ಸ್ಮರಣೆಯನ್ನೂ ತಪ್ಪಿಸಿ ನಿರಂತರವೂ ಸಮೃದ್ಧವಾದ ಆನಂದವನ್ನೀಯುವದೋ ಅಂಥ ಪವಿತ್ರ ವಾಙ್ಮಯವೇಸಾಹಿತ್ಯ. ಇನ್ನೂ ಆಳವಾಗಿ ನೋಡುವದಾದರೆ "ಸತ್ಯಂ-ಶಿವಂ-ಸುಂದರಂ" ಎನ್ನುವಂಥ ಪರಿಶುದ್ಧ ಜ್ಞಾನವೇ ಸಾಹಿತ್ಯ.

ಹೀಗೆಲ್ಲ ಭಿನ್ನ ಭಿನ್ನತೆಯನ್ನು ಅದರ ಮಹತ್ವಕ್ಕಾಗಿ ಹೇಳಿದರೂ ಅದರ ಚಿರಂತನವಾದ ಸತ್ಯತನಕ್ಕೆ ಇವಾವುದೂ ಭಂಗತರಲಾರವು. ಸಂಪ್ರದಾಯ—ಪ್ರಗತಿಶೀಲ ಇತ್ಯಾದಿಯಾಗಿ ನಮ್ಮ ಧೋರಣೆಯ

ಸಾಧನೆಗಾಗಿ ಅದೆಷ್ಟೋ ಕೂಗಿಕೊಂಡರೂ ಅದರ ನೈಜವಾದ ವ್ಯಾಖ್ಯೆಯನ್ನು ಮಾತ್ರ ಎಲ್ಲರೂ ಒಪ್ಪಿಕೊಳ್ಳಲೇ ಬೇಕಾಗುತ್ತದೆ ಸಹಿತ ಶಬ್ದವೇ ಸಾಹಿತ್ಯವೆನಿಸಿದೆ. ಇದರ ಹಿಂದೆ ಹಿತಕಾರಿಯಾದ ಬೇಕಾದಷ್ಟು ವಿಚಾರಗಳನ್ನು ಸೇರಿಸಿಕೊಂಡರೂ ಅದರ ಸಾತ್ವಿಕ ಸ್ವಭಾವಕ್ಕೆ ಸ್ವಲ್ಪವೂ ಕಲಂಕ ತರಲಾರವು. ಖಚಿತವಾಗಿ ಹೇಳುವದಾದರೆ —ಅಬಾಧಿತವಾದ ಸರಳಸತ್ವ ಶುದ್ಧಿಯುಳ್ಳ ವಿಚಾರಗಳನ್ನು ಸೃಷ್ಟಿಸುವಂಥ ರಸಾತ್ಮಕ ವಾಙ್ಮಯುವೇ ಸಾಹಿತ್ಯವೆನ್ನೋಣ! ಇದು ಯಾವ ಪ್ರಕೃತಿಯುವರಿಗೂ ಪ್ರತಿಕೂಲವೆನ್ನಿಸದು.

ಜೀವನದಲ್ಲಿ ಸಿದ್ಧಿಯನ್ನು ಕಾಣಬೇಕೆನ್ನುವವರೆಲ್ಲರೂ ಈ ಸಾಹಿತ್ಯದ ಉಪಾಸಕರಾಗಬೇಕು. ಇದರ ವಿಶಾಲವಾದ ಕೃಪಾಛತ್ರದಡಿಯಲ್ಲಿ ನೆರೆಯುಬೇಕು. ಅಲ್ಲಿ ಸತ್ಯವಿದೆ. ಸೌಂದರ್ಯವಿದೆ. ಶಾಂತಿಯಿದೆ. ಸಮಾಧಾನವಿದೆ. ಬೇಕಾದುದೆಲ್ಲವೂ ಇವೆ. ಅದೊಂದು ಅನಂತ ನಿಧಿಗಳ ಅಕ್ಷಯ ಭಂಡಾರ. ನಾವಲ್ಲಿ ಶೋಧಿಸಬೇಕು ನಮ್ಮ ಬಾಳಿನ ಬದುಕುಗಳೇನು? ಅವನ್ನೆಲ್ಲ ಹೇಗೆ ಸಿದ್ಧಿಸಿಕೊಳ್ಳಬೇಕು? ಸುತ್ತಲಿನ ನಾನಾ ವಿಧ ವಿಷಮಯ ವಾತಾವರಣ—ಅಜ್ಞಾನ—ಅವಿವೇಕ—ಆಲಸ್ಯ--ಅತೃಪ್ತಿ ಇವೆಲ್ಲವುಗಳಿಂದ ಮುಕ್ತವಾಗಿ ಬದುಕಿಕೊಂಡು ಜೀವನದ ಸತ್ಯವಾದ ಆದರ್ಶವನ್ನು ಹೇಗೆ ಸಿದ್ಧಿಸಿಕೊಳ್ಳಬೇಕು? ಎನ್ನುವದಕ್ಕೆಲ್ಲ ಉತ್ತರ ಈ ಸಾಹಿತ್ಯವೇ ಕೊಡಬಲ್ಲುದು.

ಸರಿ! ಸಾಹಿತ್ಯದಿಂದಲೇ ಸಿದ್ಧಿಯೆನ್ನುವಾಗ ಭಾರತದ ಜನಜೀವನವಿಂದು ಸಿದ್ಧಿಹೊಂದಿದೆಯೇ? ತನ್ನ ಆದರ್ಶವನ್ನು ಸಾಧಿಸಿದೆಯೇ? ಇದಕ್ಕೊಂದೇ ಉತ್ತರ ಇಲ್ಲವೆಂದು ಜೀವನದ ಆಶೆ ಸಿದ್ಧಿಯಾಗಿಲ್ಲ. ಬೇಕಾದದ್ದು ಸಾಧಿಸಲಿಲ್ಲ. ಅನೇಕ ತೊಂದರೆ ತೊಡಕುಗಳಿಂದ ನಮ್ಮ ಪ್ರಗತಿಯು ಬೆಳಕು ಇನ್ನೂ ಸಾಕಷ್ಟು ಬೆಳಗಲಿಲ್ಲ. ಇದು ನಮ್ಮ (ಅ) ಸಾಹಿತ್ಯದ ಪ್ರಭಾವ.

ಸಾಹಿತ್ಯ ಕ್ರಿಯೆ ಇಷ್ಟೊಂದು ಮಹತ್ವದ್ದೆಂದು ಕಂಡುಕೊಂಡರೂ ನಮ್ಮಲ್ಲಿ ಸಾಹಿತ್ಯದ ಬೆಳವಣಿಗೆ ಹುಲುಸಾಗಿ ಸಮೃದ್ಧವಾಗಿ ಬೆಳೆಯದಿದ್ದುದು ವಿಷಾದಕರ! ಇದಕ್ಕೆ ನಮ್ಮ ವಿದ್ಯಾಭ್ಯಾಸವೇ ಮೂಲ ಕಾರಣ

ಜನತೆಗೆ ಸಾಕಷ್ಟು ಶಿಕ್ಷಣಗಳಿಲ್ಲದೇ ಅವರ ಮಿದುಳಿಗೆ ಸರಿಯಾಗಿ ಸಂಸ್ಕಾರವಿಲ್ಲದಿರುವಾಗ ನಾವು "ಸಾಹಿತ್ಯ ಸಂಸ್ಕೃತಿ ಬೆಳೆಯಬೇಕು-- ಜನ ಜಾಗ್ರತರಾಗಬೇಕು. ಇಂದಿನ ನಾನಾ ವಿಧ ಸಂಸ್ಥೆ ಸಂಪ್ರದಾಯ ಗಳನ್ನೆಲ್ಲ ಸಮೀಕರಿಸಿಕೊಂಡು ನಮ್ಮ ಪ್ರಗತಿಯ ದಾರಿಯನ್ನು ಕಾಣು ವಂಥ ವಿಚಾರ ಶಕ್ತಿಯನ್ನು ತಂದುಕೊಳ್ಳಬೇಕು. ಅದು ಬೇಕು. ಇದು ಬೇಕು" ಎಂದು ಬೇಕುಗಳ ಪಟ್ಟಿಯನ್ನೇ ತಯಾರಿಸಿ ಗುಲ್ಲೆಬ್ಬಿಸಿದರೆ ಅದರಿಂದ ಯಾವ ಪ್ರಯೋಜನವಾಗಬಹುದು? ತಾನೊಬ್ಬ ಲೇಖಕನೋ ಭಾಷಣಕಾರನೋ ಎಂದು ಹೇಳಿಸಿಕೊಂಡಿದ್ದೇವೆ ಹೊರತು ಆ ಗುಲ್ಲಿ ನಿಂದ ಜನತೆಯ ರೋಗ ನಿವಾರಣೆಯಾಗಲಾರದು. ಸವಿಯಾದ ಫಲ ವನ್ನು ಅಪೇಕ್ಷಿಸುವಾಗ ಆದರ ಹಿನ್ನೆಲೆಯಲ್ಲಿ ನಮ್ಮ ಕರ್ತವ್ಯವು ಹೇಗಿರ ಬೇಕೆಂದು ವಿಚಾರಿಸ ಬೇಡವೇ? ಗಿಡವಿರುವಾಗಲೇ ಅದರ ಬೆಳವಣಿಗೆಗೆ ಬೇಕಾಗುವಂಥ ಮಣ್ಣು ನೀರು ಮುಂತಾದುವುಗಳಿಂದ ಚೆನ್ನಾಗಿ ಬೆಳೆಸಿ ಕೊಂಡರೆ ಅದರಿಂದ ಸುಲಭವಾಗಿ ಸವಿಯಾದ ಫಲ ಪಡೆಯಬಹುದು. ಭವಿಷ್ಯದಲ್ಲಿ ಉತ್ತಮ ಸ್ಥಿತಿಯನ್ನು ಬಯಸಿದಾಗ ವರ್ತಮಾನದಲ್ಲೇ ಆತನು ಸರಿಯಾಗಿ ದುಡಿಯಬೇಕಾದದ್ದು ಅಗತ್ಯ. ಅಂತೇ ನಮ್ಮ ಜನಾಂಗದಲ್ಲಿ ಚೈತನ್ಯ—ಜಾಗ್ರತಿ—ಶಕ್ತಿ ಇವೆಲ್ಲ ಮೂಡಬೇಕಾದರೆ ನಮ್ಮ ಶಿಕ್ಷಣವೂ ಅಂತಹದ್ದಿರಬೇಕು -- ಗೆಳೆಯರೊಬ್ಬರು -- "ನಮ್ಮ ಸಾಹಿತ್ಯ ಸಂಸ್ಥೆಗಳು ಕೃತಿ ಚೆನ್ನಾಗಿಲ್ಲದಾಗ ಬರಹಗಾರರನ್ನು ನಿಂದಿ ಸುತ್ತವೆ. ಚೆನ್ನಾಗಿದ್ದಾಗ ಓದುಗರನ್ನು ನಿಂದಿಸುತ್ತವೆ ಆದರೆ ನಾಡಿನ ವಿದ್ಯಾಲಯಗಳಲ್ಲಿ ವಿದ್ಯೆ ಲಯವಾಗುತ್ತಿರುವುದನ್ನು ಗಮನಿಸದೆ ಬರಿಸೀ ದೂರಿದರೆ ಫಲವೇನು?" ಎಂದಿದ್ದಾರೆ. ಈ ಮಾತಿನಲ್ಲಿ ನೂರಕ್ಕೆ ನೂರರಷ್ಟು ಸತ್ಯವಿದೆ.

ನಮ್ಮಲ್ಲಿ ಸಾಹಿತ್ಯ ನಿರ್ಮಾಣ ಕಾರ್ಯ ಮುಂದರಿಯಲಿಲ್ಲ. ಹೊಸ ಹೊಸ ಸಾಹಿತ್ಯದ ಹೊತ್ತಿಗೆಗಳು ಸೃಷ್ಟಿಯಾಗಬೇಕು ಎನ್ನುವಾಗ ಅವು ಎಣಿಕೆಗಿಂತಲೂ ಹೆಚ್ಚಾಗಿಯೇ ನಿರ್ಮಾಣವಾಗಿವೆಯೆಂದು ಪುಸ್ತಕ ದಂಗಡಿಗೆ ಹೋದರೆ ತಿಳಿಯುವಂತಿದೆ. ಆದರೇನು? ಆ ರಾಶಿ ರಾಶಿ ಯಾಗಿ ಬಿದ್ದಿರುವ ಪುಸ್ತಕಗಳಲ್ಲಿ ಕೆಲವಾದರೂ ಸತ್ವಶಾಲಿಯಾದ

ಸಾಹಿತ್ಯದ ಝುರಿಯಿಂದ ಶೋಭಿಸುವಂತಹದ್ದಿವೆಯೇ? ನಿರ್ಜೀವಿ—ನಿಃಸತ್ವ ಚಿತ್ರಗಳೇ ಹೆಚ್ಚು! ಇಂದಿನ ಮಾನವ ಪ್ರಪಂಚದಲ್ಲಿ ದೌರ್ಬಲ್ಯ ನಿಃಸ್ತೇಜಸ್ಕ ಜೀವಿಗಳೇ ಅಧಿಕವಿರುವಂತೆ ಸಾಹಿತ್ಯ ಪ್ರಪಂಚದಲ್ಲೂ ಓಜಸ್ವಿಯಾದ ಹೃದಯಂಗಮ ಹೊತ್ತಿಗೆಗಳು ಬೆರಳಿನಿಂದ ಎಣಿಸು ವಷ್ಟು ಮಾತ್ರ ಇವೆ. ಜನತೆಯನ್ನು ಮೋಹಕಗೊಳಿಸುವ ಹಾಗೆ ಹೊತ್ತಿಗೆಯ ಮುಖ ಪೃಷ್ಠವನ್ನು ತ್ರಿವರ್ಣರಂಜಿತವಾಗಿರಿಸಿ–ರಂಭೆಯೋ ಅಪ್ಸರೆಯೋ ಮುಂತಾದ ಚಿತ್ರಗಳನ್ನಿಟ್ಟು ಹೋಟೇಲಿನ ಬಿಸಿಬಿಸಿ ದೋಸೆಗಳಂತೆ ಖರ್ಚಾಗಬೇಕೆಂಬ ಹುಚ್ಚು ಹಂಬಲಕ್ಕೆ ಬಲಿ ಬಿದ್ದು ಇಂಥ ಸಾಹಿತ್ಯ ನಿರ್ಮಾಣವಾಯಿತು. ಪುಸ್ತಕದ ಹೊರಗಿನ ಸೌಂದ ರ್ಯಕ್ಕೆ ಲಕ್ಷ್ಯ ಕೊಟ್ಟಂತೆ ಒಳಗಿನ ಸಾಹಿತ್ಯಕ್ಕೂ ಲಕ್ಷ್ಯ ಕೊಟ್ಟಿದ್ದರೆ ಈ ರೀತಿ ಶುಷ್ಕ ಬರಹಕ್ಕೆ ಅವಕಾಶ ದೊರೆಯುತ್ತಿದ್ದಿಲ್ಲ. ಒಳಗಿನ ಸಾಹಿತ್ಯಕ್ಕೆ ಜನ ಮೆಚ್ಚಲಾರದೆಂದು ಈ ಪ್ರಯೋಗ ನಡೆಯಿತು. ಇಂಥ ನೀರಸ ಚಿತ್ರಗಳಿಂದ ಇಂದು ಸಾಹಿತ್ಯ ವಿಷಯದಲ್ಲಿ ಜನತೆಯಲ್ಲಿ ಅಪಾ ರ್ಥತೆಯಾಗಿದ್ದಲ್ಲದೇ ದ್ವೇಶ—ಅಸೂಯೆಗಳಂಥ ತಾಮಸೀ ಪ್ರವೃತ್ತಿಗೂ ಅವಕಾಶವನ್ನೀಯುತ್ತಿದೆಯೆಂದರೆ ಅಪರಾಧವಾಗಲಿಕ್ಕಿಲ್ಲ. ಆದರಿಂದ ಸಾಹಿತ್ಯ ಸಂಸ್ಥೆಯವರು ಹೆಚ್ಚಿನ ಹೊಣೆಗಾರಿಕೆ ಹೊರಬೇಕಾಗಿದೆ. ಪುಸ್ತಕವನ್ನು ಅಚ್ಚಿನ ಮನೆಗೆ ಸೇರಿಸುವಾಗ ಆ ಸಂಸ್ಥೆಯವರ ಒಪ್ಪಿಗೆ ಪಡಕೊಳ್ಳುವ ನಿರ್ಬಂಧವಿರಬೇಕು. ಇಲ್ಲದಿದ್ದರೆ ಅವರ ಮೇಲೆ ಕ್ರಮ ಹಾಕುವ ಅಧಿಕಾರ ಸಂಸ್ಥೆಯವರಿಗಿರಬೇಕು ಹೀಗಾದಾಗಲೇ ಸಾಹಿತ್ಯದ ನೈಜ ಹೊತ್ತಿಗೆಗಳಿಗೆ ಮನ್ನಣೆ ದೊರೆಯುವದು. ಸಾಹಿತ್ಯಕ್ಕೂ ಒಂದು ಪೂಜ್ಯತೆ ದೊರೆಯುವದು.

ಇನ್ನು ಇಂದಿನ ಸಾಹಿತ್ಯದಿಂದ ಸಿದ್ಧಿಯಾಗದಿರುವುದಕ್ಕೆ ಸಾಹಿತಿಗ ಳಲ್ಲೂ ಕೆಲದೋಷವಿದೆಯೆಂದರೆ ತಪ್ಪಾಗಲಿಕ್ಕಿಲ್ಲ. ತನ್ನ ಕಾವ್ಯದಲ್ಲಿ ಮಂಡಿಸಿದ ಸಿದ್ಧಾಂತಗಳು ವಿಚಾರಗಳು ಆ ಸಾಹಿತಿಯಲ್ಲೇ ಇಲ್ಲದಿ ದ್ದರೆ ಆ ವಿಚಾರ ಕೃತಿಯಲ್ಲಿರದೇ ಬರೇ ಮಾತಿನವಾಗಿದ್ದರೆ ಅವು ಅಷ್ಟೊಂದು ಸಿದ್ಧಿಕಾರಕವಾಗಲಾರವು. ನೀತಿಯ ತಳಹದಿಯ ಮೇಲೆ ಇನ್ನೊಂದು ಜೀವನ ನಿಲ್ಲಿಸುವ ಸಾಹಿತಿಯ ಜೀವನದಲ್ಲೂ ನೈತಿಕ

ತುಂಬಿರಬೇಕಾದದ್ದು ಆಗತ್ಯ. ಯಾವ ಸತ್ಯಸಿದ್ಧಾಂತದ ಕೃತಿಯಾದರೂ ಅದು ಆ ಕೃತಿಕಾರನ ಹೃದಯದ ಪ್ರತಿಬಿಂಬವಾಗಿರಬೇಕು. ಪ್ರಣಯವಿಯೋಗವನ್ನು ಎಷ್ಟೆಲ್ಲ ಜನ ನೋಡಿಲ್ಲ. ಆದರೆ ಕ್ರೌಂಚ ಮಿಥುನಗಳ ಪ್ರಣಯವಿಯೋಗವು ವಾಲ್ಮೀಕಿಯೊಬ್ಬನ ಹೃದಯದಲ್ಲೇ ಅನುಕಂಪ ಹುಟ್ಟಿಸಿ—ರಮ್ಯವಾದ ಸೊಗಸಾದ ಸತ್ಯಕಾವ್ಯ ಗಂಗೆಯನ್ನೇ ಪ್ರವಾಹವಾಗಿ ಹರಿಸಿತು ಇದು ವಾಲ್ಮೀಕಿಯ ಸಮಗ್ರ ವಿಶ್ವಜೀವಿಗಳೊಡನೆಯೂ ಬೆರೆತುಕೊಂಡ ನೈರ್ಮಲ್ಯವಾದ ಭಾವನೆಯನ್ನೂ— ಜೀವನದ ಮಧುರ ಸಂಗೀತದಲ್ಲಿ ಅಪಸ್ವರಕ್ಕೆ ಹೇಸುವ—ಅನ್ಯಾಯ— ಹಿಂಸೆಗಳನ್ನು ಪ್ರತಿಭಟಿಸುವ ಪ್ರಚಂಡಶಕ್ತಿಯನ್ನೂ ವ್ಯಕ್ತಗೊಳಿಸುತ್ತದೆ. ಇದೇ ವಾಲ್ಮೀಕಿಯ ಸಾಹಿತ್ಯ ಸಿದ್ಧಿಯ ದ್ಯೋತಕ. ಸಾಹಿತ್ಯದ ಮೊದಲನೆಯ ಕೃತಿಯಿಂದ ಈ ವಾಲ್ಮಿಕಿಯ ರಾಮಾಯಣದಲ್ಲಿ "ಸತ್ಯಕ್ಕೆ ಸಾವಿಲ್ಲ"ವೆನ್ನುವ ಸಿದ್ಧಾಂತವನ್ನು ಖಚಿತಪಡಿಸುವ ಒಂದು ಸಾಂಸಾರಿಕ ಜೀವನ ಅದರಲ್ಲಿ ಚಿತ್ರಿತವಾಗಿದೆ ತಂದೆ ಮಕ್ಕಳು— ಅಣ್ಣ—ತಮ್ಮಂದಿರು. ಪತಿ— ಪತ್ನಿಯರು, ಒಡೆಯ ಸೇವಕರು, ಇವರೊಳಗೆ ಇರಬೇಕಾದ ಅನ್ಯೋನ್ಯ ಪ್ರೇಮ—ಕಷ್ಟನಷ್ಟಗಳು ಒದಗಿದಾಗ ಹೇಗೆ ನಡೆದುಕೊಳ್ಳಬೇಕು—ಸತ್ಯ ಅಹಿಂಸೆ, ಏಕಪತ್ನಿವ್ರತ, ಸಹೋದರ ಪ್ರೇಮ, ಪಿತೃಭಕ್ತಿ ಇವೆಲ್ಲವೂ ಎಷ್ಟು ಅವಶ್ಯ—ಅಗತ್ಯ, ಮನುಷ್ಯನು ಅವುಗಳನ್ನು ವಿವೇಕದಿಂದ ಆಳವಡಿಸಿಕೊಂಡು ಕರ್ತವ್ಯ ಬುದ್ಧಿಯಿಂದ ಸಾಗಲಿಕ್ಕೆ ಬೇಕು ಎನ್ನುವ ವಿಚಾರ ನಿತ್ಯದಲ್ಲೂ ಬೆಳಗುವ ಸೂರ್ಯನಂತಿದೆ. ನಮ್ಮ ಸಾಹಿತಿಗಳಲ್ಲೂ ಇಂಥ ಆದರ್ಶ— ವಿಶಾಲ—ಹೃದಯ ಭಾವನೆ ಮೂಡಬೇಕು. ಅನುಭವವೇ ಕೃತಿಯಾಗಬೇಕು.

ಸಂಪ್ರದಾಯ ಪ್ರಗತಿಶೀಲ ಯಾವುದೇ ಹೇಳಲಿ! ಅದು ಪಕ್ಷ ಪಂಗಡಗಳ ಪೆಡಂಭೂತಕ್ಕೆ ಅವಕಾಶಕೊಡದೇ ಜೀವನ ವಿಕಾಸಕ್ಕೆ ಬೇಕಾದ ಸತ್ವಯುಕ್ತವಾದ ಸಾಹಿತ್ಯ ನಿರ್ಮಾಣದಲ್ಲಿ ಮುಂದರಿಯಲಿ! ಗೀತೆಯಂಥ ಸರ್ವೋತ್ತಮ ಸಾಹಿತ್ಯ ನಮಗಿಂದು ಬೇಕು. ಅರ್ಜುನನಂಥ ವೀರ ಸೇನಾನಿಯು ಮೋಹವಶನಾಗಿ—ಕರ್ತವ್ಯಮೂಢನಾಗಿ

ಹೇಡಿಯಾಗಿ ಕುಳಿತಿರುವಾಗ "ಕ್ಷುದ್ರಂ ಹೃದಯ ದೌರ್ಬಲ್ಯಂ" ಎಂದು ಎಚ್ಚರಿಸಿ ಚೈತನ್ಯ ತುಂಬಿದಂಥ ಪರಿಶುದ್ಧ ಸಾತ್ವಿಕ ಸಾಹಿತ್ಯ ಸೃಷ್ಟಿಯಾಗಲಿ! ಇದರಿಂದ ಜೀವನದ ಸಿದ್ಧಿಯಾಗಿ ಸಾಹಿತ್ಯ ಜೀವನಗಳೊಳಗೆ ಸಾಮರಸ್ಯವಾಗಿ ಭರತ ಸಂಸ್ಕೃತಿಯು ಉಜ್ವಲ ಸಿದ್ಧಿಯಿಂದ ಧ್ರುವತಾರೆಯಂತೆ ಅಮರವಾಗಿ ಬೆಳಗಲಿ!

## ೩ ಕಥಾಸಾಹಿತ್ಯ

ಮಾನವ ಪ್ರಪಂಚದಂತೆ ಸಾಹಿತ್ಯದ್ದೂ ಒಂದು ಪ್ರಪಂಚವೇ ಇದೆ ಅಲ್ಲಿಯ ಜೀವಿಗಳೆಂದರೆ ಕಾವ್ಯ—ಕವಿತೆ—ಕಥೆ—ಚಿತ್ರಗಳೇ! ಇವು ಹುಟ್ಟಿಕೊಂಡಿದ್ದು ಇಂದಲ್ಲ—ನಿನ್ನೆಯಲ್ಲ. ಮಾನವನು ತನ್ನ ಸುಂದರ ಪ್ರಪಂಚವನ್ನು ರಚಿಸಲು ಯಾವಾಗ ಪ್ರಾರಂಭಿಸಿದನೋ ಆವಾಗ ಅವು ಕಾಣಿಸಿಕೊಂಡವು, ಅಂದಿನಿಂದ ಇಂದಿನವರೆಗೂ ಅವ್ಯಾಹತವಾಗಿ ಬಾಳಿಕೊಂಡು ಬದುಕಿಕೊಂಡು ಬೆಳಗಿಕೊಂಡು—ಬಾಳಿಗೊಂದು ಸಂತಸವನ್ನುಂಟುಮಾಡುತ್ತ ಬಂದಿವೆ. ಆದರೆ ಇದು ತನ್ನ ಪ್ರಪಂಚಕ್ಕಾಗಿ ಅಲ್ಲ. ತನ್ನನ್ನು ಉಪಾಸಿಸುವ ಮಾನವ ಪ್ರಪಂಚಕ್ಕಾಗಿ. ಇಷ್ಟು ವಿಶಾಲವಾಗಿದೆ ಕಥಾಸಾಹಿತ್ಯದ ನಿಃಸ್ವಾರ್ಥ ಅಂತಕರಣ!

ಈ ಸಾಹಿತ್ಯ ಪ್ರಪಂಚದಲ್ಲಿ ಕಥೆಗಳೊಂದು ಅಗ್ರಸ್ಥಾನ ದೊರಕಿಸಿಕೊಂಡಿವೆ ಪ್ರಪಂಚದ ಸ್ಥಿತಿಗತಿಗಳು ಪರಿವರ್ತನೆ ಹೊಂದಿದಂತೆ ರೂಪ ಸ್ವಭಾವಗಳು ಬದಲಾವಣೆಯಾದಂತೆ ತನ್ನ ಆಕಾರದಲ್ಲಿಯೂ ಜನಮನವನ್ನು ರಂಜಿಸುವ ಸಾಧನ ವಿಧಾನಗಳನ್ನು ಅಳವಡಿಸಿಕೊಂಡು ಮುಂದರಿಯುತ್ತಲಿರುವದು, ಇದೇ ಪ್ರಗತಿಯ ಲಕ್ಷಣ!

ಉಪನಿಷತ್ಕಾಲದ ವಿಚಾರಗಳನ್ನು ಪರಿಶೀಲಿಸಿದಾಗ ಆ ಕಾಲದಲ್ಲಿ ಆಧ್ಯಾತ್ಮಿಕ ತತ್ವಜ್ಞಾನಗಳನ್ನೂ ಕಥಾ ಶೈಲಿಯಿಂದಲೇ ಹೇಳುವ ಸನ್ನಿವೇಶವು ಕಂಡುಬರುವುದು. ವೈದಿಕ ಮಂತ್ರಗಳಲ್ಲಿಯೂ ಎಷ್ಟೋ ವಿಚಾರಗಳನ್ನು ಕಥಾ ರೂಪವಾಗಿಯೇ ಹೇಳಿದ್ದುಂಟು. ಇದರಿಂದಲೇ ಕಥನಕಲೆಯು ಸೃಷ್ಟಿಯಾದ ಕಾಲ-ಅದರ ಸ್ಥಾನಮಾನಗಳನ್ನು ಸುಲಭವಾಗಿ ಊಹಿಸಿಕೊಳ್ಳಬಹುದು.

ಮನಸ್ಸಿನ ಮೇಲೆ ಹೆಚ್ಚು ತೀವ್ರವಾದ ಪರಿಣಾಮವನ್ನುಂಟುಮಾಡುವ ಸಾಧನಗಳಲ್ಲಿ ಕಥನ ಕಲೆಯನ್ನು ಹೆಚ್ಚಿನದೆಂದು ಕಂಡು ಹಿಡಿಯಲಾಯಿತು. ಕಥಾರೂಪದಲ್ಲಿದ್ದ ವಿಚಾರಗಳು ಕಠಿಣವಾಗಿದ್ದರೂ ಬುದ್ಧಿಯು ಅದನ್ನು ಶೀಘ್ರವಾಗಿ ಎಳೆದುಕೊಳ್ಳುವದು. ಕೋಮಲವಾದ ಬಾಲಕರ ಬುದ್ಧಿಗಂತೂ ಈ ಕಥೆಗಳು ಅಮೃತದಂತೆ. ಅಂತಹ ಬಾಲ ಬುದ್ಧಿಯನ್ನು ವಿಕಾಸಗೊಳಿಸುವದರಲ್ಲಿ ಇವು ಭಾರೀ ಯಶಸ್ಸು ಪಡೆದಿವೆ. ಅದರಿಂದಲೇ ಪಠ್ಯಪುಸ್ತಕದಲ್ಲಿ ಕಥೆಗಳಿಗೇ ಹೆಚ್ಚು ಅವಕಾಶ. ಮೆಚ್ಚಿಗೆಯೂ ಹೆಚ್ಚು.

ಈ ಪ್ರಪಂಚದ ಜೀವಿಗಳೆಲ್ಲ ಸುಸಂಘಟಿತರಾಗಿ ಸುಸಂಬದ್ಧವಾಗಿ ಒಂದೆಡೆಗೆ ಸೇರಿಕೊಂಡಾಗ ಆ ಎಲ್ಲ ಕಲೆಗಳನ್ನೂ ಸಪ್ರಮಾಣವಾಗಿ ಬೆರಸಿ ಬಳಸಿಕೊಂಡರೆ ಅದೊಂದು ರಸಾತ್ಮಕವಾದ ರುಚಿಯ ಪಾಕ. ಎಂದೂ ಯಾರೂ ಬಿಡದಷ್ಟು ಮಧುರತೆ ಅದರಲ್ಲಿ. ಪ್ರಗತಿಯ ತತ್ವ ಪೂರ್ಣತೆ ಅಂತರಂಗದಲ್ಲಿ. ಇದೇ ಅಮರ ಕಾವ್ಯ. ಸುಶ್ರಾವ್ಯವಾದ ಜೀವನದ ಸಂಗೀತ. ಈ ಕಾವ್ಯದ ಕ್ರಿಯೆಯನ್ನೇ ಕಂಡು—"ಕಾವ್ಯಂ ಯಶಸೇ-ಅರ್ಥಕೃತ-ವ್ಯವಹಾರವಿದೆ-ಶಿವೇತರ ಕ್ಷೀತಯೋ!..."ಎಂದು ಪಂಡಿತರೊಬ್ಬರು— "ಕಾವ್ಯಂಮಾನಂದಾಯ" ಎಂದು ಗುಡುಗಿದರು. ಇನ್ನೆಷ್ಟೋ ಜನರು ಮತ್ತೆಷ್ಟೋ ವಿಧವಾಗಿ ಇದರ ಗೊತ್ತುಗುರಿಗಳನ್ನು ಬರೆದರು

ಇಂಥ ಬುದ್ಧಿ ವಿಕಾಸದ ಕಾವ್ಯದ ಜೀವಾಳವೆನಿಸಿಕೊಂಡು ಮೆರೆಯುತ್ತಿದೆ ಕಥನ ಶೈಲಿ ಜೀವ ಜೀವನ ಜೀನ. ಹೃದಯದ ಜ್ಯೋತಿ. ಈ ಜ್ಯೋತಿಯೇ ತನ್ನ ಪ್ರಶಾಂತ ಕಿರಣಗಳಿಂದ ಕಾವ್ಯ ಜೀವನವೆಲ್ಲವನ್ನೂ ಪ್ರಕಾಶಗೊಳಿಸುವದು. ವಿಸ್ತರಿಸುವುದು. ನಗಿಸುವುದು. ಸಂತೋಷಕ್ಕೆ ಹೊಂದಿಸುವುದು ಆದರಿಂದ ಹಿಂದಿನ ಎಲ್ಲಾ ಕವಿಗಳೂ ತಮ್ಮ ಕಾವ್ಯದಲ್ಲಿ ಕಥನ ಕಲೆಗೆ ಮೆಚ್ಚಿನದಾದ ಸ್ಥಾನಮಾನಗಳನ್ನು ಕೊಟ್ಟರು. ಯಾರು ತಮ್ಮ ಕಾವ್ಯದಲ್ಲಿ ಹೆಚ್ಚಾಗಿ ಕತೆಗಳನ್ನೇ ಬಳಸಿಕೊಂಡರೋ ಅವರ ಕಾವ್ಯವೇ ಹೆಚ್ಚು ಆದರ್ಶ—ಆದರಣೀಯವಾಯಿತು. ಆದರಲ್ಲಿ ಕಾಳಿದಾಸನ ಉತ್ತಮ ಕಾವ್ಯಗಳು ಆಬಾಲವೃದ್ಧರ ಪರ್ಯಂತ

ಇಂದಿಗೂ ಹೃದಯಂಗಮವಾಗಿ ಮನ್ನಣೆ ಪಡೆದುದು ಕಥೆಗಳ ಪ್ರಭಾವ ದಿಂದಲೇ. ಕಥಾಪ್ರಿಯರೊಬ್ಬರು— ಕಾವ್ಯಗಳಲ್ಲಿ ಕಥೆಗಳಿಲ್ಲದಿದ್ದರೆ ಕಣ್ಣಿಲ್ಲದ ಮನುಷ್ಯನಂತೆ ಅವು ನಿರ್ಜೀವಿ! ಅಪ್ರಯೋಜಕ, ಎಂದು ಹೇಳಿ ಬಿಟ್ಟಿದ್ದಾರೆ.

ನೀತಿಯು ಸತ್ಯ ವಿಚಾರಗಳನ್ನು ಬುದ್ಧಿಪಟಲದ ಮೇಲೆ ಸುಂದರ ವಾಗಿ ಭದ್ರವಾಗಿ ಚಿರಂತನವಾಗಿ ಇರಬೇಕಾಗುವಂತೆ ಎರಕ ಹೊಯಿದು ಚಿತ್ರೀಕರಿಸಿಕೊಳ್ಳುವದರಲ್ಲಿ ಕಥನ ಕಲೆ ಉತ್ಕೃಷ್ಟ ಪಡಿಯಚ್ಚುಗಳು. ಇವುಗಳ ಉಪಯೋಗದಿಂದ ಸಂಪಾದಿಸಿಕೊಳ್ಳುವಷ್ಟು ತಯಾರಿಸುವಷ್ಟು ಪ್ರಯೋಜನ ಇನ್ನಾವುದರಿಂದಲೂ ಸಾಧ್ಯವಿಲ್ಲ. ಹೀಗೆ ಕಥಾ ಶೈಲಿಯು ಇಷ್ಟು ಸರ್ವೋತ್ತಮವಾಗಲು ಆದರಲ್ಲಿರುವ ರಮ್ಯತೆಯೇ ಕಾರಣ. ಕಥೆಗಳಲ್ಲಿ ಚಿತ್ರಿತವಾದ ಜೀವನಕ್ಕೂ ನಮ್ಮ ಜೀವನಕ್ಕೂ ಒರೆ ಹಚ್ಚಿ ನೋಡಿದಾಗ ನಮ್ಮ ಜೀವನದಲ್ಲಿಯ ನ್ಯೂನತೆ ಅತಿರೇಕ—ಅಕ್ರಮ ಅವಿಚಾರಗಳನ್ನು ಸ್ಪಷ್ಟವಾಗಿ ಕಂಡುಹಿಡಿದು ಅವುಗಳನ್ನು ಸುಧಾರಿಸಿ ಕೊಳ್ಳಲು ಸುಲಭವಾಗಿ ಅನುಕೂಲತೆ ದೊರೆಯುವದು.

ನಾವು ಎಲ್ಲಿಯಾದರೂ ಕಾಣುತ್ತೇವೆ—ಕಥೆ ಹೇಳುವವರು ಬಂದ ರೆಂದರೆ ಬೆಲ್ಲಕ್ಕೆ ನೊಣವಿದ್ದಂತೆ. ಆಬಾಲವೃದ್ಧರ ಪರ್ಯಂತರ ಅವರಿದ್ದಲ್ಲಿ ಸೇರಿ ತುಂಬಾ ಪ್ರೀತಿಯಿಂದ ಕಥೆ ಕೇಳುವದು. ತುಸು ಹಿಂದಿನ ಕಾಲದಲ್ಲಿ ಹಳ್ಳಿಯ ಜನರು ನಿತ್ಯವೂ ಸಾಯಂಕಾಲ ಮನೆಯ ಕೆಲಸ ಗಳನ್ನೆಲ್ಲಾ ತೀರಿಸಿಕೊಂಡು ಶ್ರಮನಿವಾರಣೆಗಾಗಿಯೂ—ಪುಣ್ಯ ಸಂಪಾ ದನೆಯ ಭಾವಿಗಳಾಗಿಯೂ ಒಂದೆಡೆಗೆ ಸೇರಿ ರಾಮಾಯಣ—ಭಾರತದ ಕಥೆಗಳನ್ನು ಕೇಳಿ ಆನಂದಿಸುತ್ತಿದ್ದರು. ಅಂತಹ ಪುರಾಣಕಟ್ಟೆಗಳೆಷ್ಟೋ ಇಂದಿಗೂ ಇವೆ. ಆದರೆ ವೃತ್ತ ಪತ್ರಿಕೆಗಳ ಪ್ರಸಾರದಲ್ಲಿ ಅವುಗಳ ಪ್ರಾಬಲ್ಯ ಕಡಿಮೆಯಾಯಿತು. ಪುಸ್ತಕಾಲಯ— ವಾಚನಾಲಯಗ ಳೆಂಬ ರೂಪಾಂತರ ಹೊಂದಿದವು. ಅಲ್ಲಿಯೂ ಇಂದು ಅಂಥ ಕಥೆ ಸುದ್ದಿಗಳಿಗಾಗಿ ಜನರು ಕೂಡುತ್ತಿರುವರು,

ಈ ರೀತಿಯ ಕಥಾಸಾಹಿತ್ಯ ನಾಡಿನ ಸರ್ವವಿಧ ಅಭ್ಯುದಯಕ್ಕಾಗಿ —ಸರ್ವತೋಮುಖವಾಗಿ ಹುಲುಸಾಗಿ ಬೆಳೆಯಲೇ ಬೇಕಾದದ್ದು ಅಗತ್ಯ,

ಅವಶ್ಯ. ಆದರೆ ಈ ಕಲೆಗೆ ಯಾವ ಕೊಳೆಯೂ ಹಿಡಿಯದಂತೆ ಸುಸಂಬದ್ಧವಾಗಿ ಉಪಯೋಗಿಸಿಕೊಳ್ಳುವದರಲ್ಲಿ—ಮಾತ್ರ ನಮ್ಮ ಜಾಣತನದ ಹೊಣೆಗಾರಿಕೆ ಬಹಳವಾಗಿದೆ. ಸಾಧನವಿದ್ದ ಮಾತ್ರಕ್ಕೆ ಹೆಮ್ಮೆಗೊಳ್ಳುವುದರಲ್ಲಿ ಅರ್ಥವಿಲ್ಲ. ವಿಧಾನವೂ ತಿಳಿದಿರಬೇಕು. ಅದಿಲ್ಲದೇ ಉಪಯೋಗದಲ್ಲಿ ಹೆಚ್ಚು ಕಡಿಮೆಯಾದರೆ ವಿಪರೀತ ಪರಿಣಾಮವೂ ಆಗುವ ಸಂಭವವುಂಟು

ನಮ್ಮ ಸಂಸ್ಕೃತಿ - ಸಭ್ಯತೆಗಳ ಅಡಿಗಲ್ಲಾದ ತತ್ವದೃಷ್ಟಿಯಲ್ಲಿ "ಆಟಂ" ಬಾಂಬನ್ನಾದರೂ ಎದುರಿಸುವ ಆಧ್ಯಾತ್ಮಿಕ ಯೋಗಗಳಿವೆ. ಮೃತ್ಯುವನ್ನಾದರೂ ಬೆದರಿಸುವ ಸಾಧನೆ—ವನಸ್ಪತಿಗಳು ನಮ್ಮ ಆಯುರ್ವೇದದಲ್ಲಿವೆ. ಆದರೇನು? ಅವುಗಳ ವಿಧಾನಗಳು ನಮ್ಮಿಂದ ದೂರ, ಬಹುದೂರ ಉಳಕೊಂಡಿವೆ.

ಇಂತಾಗಬಾರದು ನಮ್ಮ ಕಥನ ಕಲೆ. ಅದನ್ನು ಸುಸಂಬದ್ಧವಾಗಿ ಪ್ರಗತಿ ಪೂರ್ಣವಾಗಿ - ಸುಂದರವಾಗಿ ಅರಳಿಸಿ ಪೋಷಿಸುವ ಕ್ರಮವಿಧಾನಗಳನ್ನು ಅಳವಡಿಸಿಕೊಳ್ಳಬೇಕು. ಆಯಾ ಕಾಲದ ಜೀವನದ ಧೋರಣೆ ತತ್ವವಿಚಾರಗಳ ತಳಹದಿಯ ಮೇಲೆಯೇ ಅದು ಮುಂದುವರಿಯಬೇಕು. ಅದರ ಕನಸಿನ ಕ್ರಿಯೆಯನ್ನು ಹೇಳುತ್ತಾ ಕೂಡ್ರುವುದರಲ್ಲೇ ನಮ್ಮ ಆದರ್ಶತನವನ್ನು ತೋರಿಸದೇ ಜೀವನರಂಗದಲ್ಲಿ ಅದರ ಪ್ರಯೋಜನ—ಪ್ರಭಾವಗಳನ್ನು "ಕರತಲಾಮಲಕ"ವಾಗಿ ಕಾಣುವಂತಾಗಬೇಕು. ಇದುವೇ ನಾಡಿನ ಪ್ರಗತಿ; ಜೀವನದ ಅಭ್ಯುದಯ.

ಬಾಳಿನ ಆಳವನ್ನು ತಿಳಿದಿರಬೇಕು ಕಲಾವಂತ. ಬದುಕಿನ ಹಿಡಿತ ಮಿಡಿತಗಳ ಅರಿವಿರಬೇಕು ಅವನಿಗೆ. ದ್ವೇಷ ಅಸೂಯೆಗಳಿಂದ ನಿರ್ಲಿಪ್ತನಾಗಿ ಪವಿತ್ರ ಅಂತಃಕರುಣಿಯಾಗಿರಬೇಕು. ವಿಶಾಲ ವಿಚಾರ ತತ್ವಗಳು ಕೇಂದ್ರೀಕೃತವಾಗಿರಬೇಕು ಅವನಲ್ಲಿ. ಅವನೇ ನಿಜವಾದ ಕಲಾವಂತ. ಇವನೇ ನಾಡಿಗೆ ಬೇಕಾದ ಚಿತ್ರಗಳನ್ನು ರೂಪಿಸಬಲ್ಲ ಶಕ್ತಿವಂತ.

ಕಥನ ಕಲೆಯಲ್ಲಿ ಸಾಧ್ಯವಾದಷ್ಟರ ಮಟ್ಟಿಗೆ ಕೃತ್ರಿಮತೆಯನ್ನು ದೂರವಿರಿಸುವದೇ ಉತ್ತಮ. ನಿಸರ್ಗತೆಯನ್ನೇ ಮನಸ್ಸು ಆದರಿಸು

ವದು ಆಕರ್ಷಿಸುವದು. ನೀತಿನಿಯಮಗಳ ಕಟ್ಟಿಲ್ಲದ ಎಷ್ಟೋ ಕೃತ್ರಿಮ ಕೃತಿಗಳು ಭಾರೀ ಕೆಟ್ಟ ಪರಿಣಾಮವನ್ನುಂಟುಮಾಡಿದ ಉದಾಹರಣೆಗಳೂ ಇವೆ. ಅಸಮಂಜಸವಾದ ರೀತಿಯಲ್ಲಿ ಅಸೂಕ್ತ ವಿಚಾರಗಳನ್ನು ಕಲ್ಪನಾತರಂಗಗಳಿಂದ ಹೆಣೆಯುವದು ಆದರ ಪವಿತ್ರ ಕೀರ್ತಿಗೆ ಕಲಂಕವನ್ನು ತರಬಹುದು. ಕತೆಗಾರರ ಲಕ್ಷ್ಯ ಇದನ್ನು ಗಮನಿಸಲಿ! ಸುಸಂಬದ್ಧವಾದ ರೀತಿಯಲ್ಲಿ ಮುಂದುವರಿಯಲಿ!

ಜೀವನದ ಉಜ್ವಲತೆಗೆ ಬೇಕುಬೇಕಾದ,ಅದು ತೃಪ್ತಿಪಡುವಂತಹ, ಆದರಲ್ಲಿ ಬಗೆಬಗೆಯ ವಿಚಾರಗಳನ್ನು ಪ್ರಚೋದನಗೊಳಿಸುವ ಸುಂದರ ಕಲಾಕೃತಿಗಳು ಸೃಷ್ಟಿಯಾಗಲಿ! ನಾಡಿನ ಪ್ರಗತಿಗೆ ಸಹಾಯನೀಡಲಿ!

ಭಾರತದ ಕಥಾಸಾಹಿತ್ಯ ಆದರ್ಶವೆನಿಸಲಿ.

## ೪ ಕಲಾಸಾಹಿತ್ಯ — ಸಂಗೀತ

ಸಾಹಿತ್ಯಕ್ಕೆ ಬಗ್ಗದ ಒರಟು ಜನಾಂಗವನ್ನೂ- ಭಿನ್ನ ಭಿನ್ನ ಪ್ರವೃತ್ತಿಯ ಜೀವನವನ್ನೂ ಒಂದಿಲ್ಲೊಂದು ವಿಧದಿಂದ ಜಾಗ್ರತಗೊಳಿಸಲಿಕ್ಕಾಗಿ ರಂಜನೆ—ವಿನೋದಗಳಿಂದ ಮನೋವಿಕಾಸವನ್ನು ಸಾಧಿಸಲಿಕ್ಕಾಗಿ ಲಲಿತಕಲೆಗಳನ್ನು ಕಂಡುಕೊಳ್ಳಲಾಯಿತು. ಈ ಪ್ರಯೋಗವೂ ಯಶಸ್ವಿಯಾಗಿ ಇಂಥ ಸಾಹಿತ್ಯ ಕಲೆಗಳು ಯುಗಯುಗಾಂತರಗಳಿಂದಲೂ ನಮ್ಮ ಜೀವನದೊಂದಿಗೆ ಹಾಸುಹೊಕ್ಕಾಗಿ ಬೆರತುಕೊಂಡು ಸಂತಸವನ್ನುಂಟುಮಾಡುತ್ತಲಿದೆ. ಇವುಗಳಲ್ಲಿ ಸಂಗೀತ-ಚಿತ್ರ ಚಲನಚಿತ್ರ-ನೃತ್ಯ—ಯಕ್ಷಗಾನ—ನಾಟಕ—ಇವು ಪ್ರಾಮುಖ್ಯವಾದ ಕಲಾಸಾಹಿತ್ಯಗಳಾಗಿವೆ.

ಸಾಮವೇದದ ಉಪವೇದ ಗಾಂಧರ್ವ ವೇದ ಇದರಿಂದ ಸಂಗೀತಕಲೆಯ ಪರಿಜ್ಞಾನವಾಯಿತು. ಮನಸ್ಸನ್ನು ಮೋಹಗೊಳಿಸುವದರಲ್ಲಿ ಇದಕ್ಕೊಳ್ಳೇ ಪ್ರೌಢಿಮೆ—ಶಕ್ತಿ ಇದೆ. ಎಂಥ ಕ್ರೌರ್ಯ ಸ್ವಭಾವವನ್ನಾದರೂ ಸೆರೆಹಿಡಿಯುವ ರಮ್ಯತೆ ಇದರಲ್ಲಿ ತುಂಬಿದೆ.

ಜೀವನ ಬದಲಾದಂತೆ ಕಲೆಯಲ್ಲಿಯೂ ಬದಲಾವಣೆಯಾಗಹತ್ತಿತು. ಹಿಂದಿನ ಇತಿಹಾಸ—ಇಂದಿನ ಪರಿಸ್ಥಿತಿ ಇವನ್ನವಲೋಕಿಸಿದರೆ

ಇದರ ಸತ್ಯತೆ ತಿಳಿಯುವಂತಿದೆ. ಅಜಂತೆಯ ಗುಹೆಯೊಳಗಿನ ಚಿತ್ರಕ್ಕೂ ಇತ್ತೀಚೆಗಿನ ಚಿತ್ರಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿದರೆ ತಿಳಿಯುವಂತಿದೆ. ಹಾಗೆಯೇ ಸಂಗೀತದಲ್ಲೂ ಹಿಂದಿನಂತೆ ಸ. ರಿ. ಗ. ಮ ಪ. ದ. ನಿ. ಸ. ಮುಂತಾದ ಆರೋಹಣ—ಅವರೋಹಣಗಳ ಗಾನ ಪದ್ಧತಿಯನ್ನು ಸಾಮಾನ್ಯ ಜನ ಬಳಸುವುದಿಲ್ಲ. ಜನತೆಯ ಅಭಿರುಚಿಗೆ ಸರಿಯಾಗಿ ಹೊಸ ಹೊಸ ಆವಿಷ್ಕಾರಗಳಾಗುತ್ತ ಬಂದಿವೆ. ತತ್ವ ಹಳೆಯದಾಗಿದ್ದು ಹೊಸ ಹಾದಿ ಹುಡುಕಿಕೊಂಡರೆ ಅದು ಆ ಕಲೆಯ ಕ್ರಿಯೆಯನ್ನು ಕೆಡಿಸುವುದಿಲ್ಲ.

ಆಧ್ಯಾತ್ಮಿಕರು-ಮಾನವನ ಹೃದಯದಲ್ಲೂ ಸಂಗೀತ ಸ್ವರಗಳನ್ನು ಮಿಡಿಸುವ ಸಾಹಿತ್ಯಗಳಿವೆ. ಅವುಗಳನ್ನು ಕಂಡುಹಿಡಿದು ವೀಣೆಯ ಸ್ವರೂಪದಲ್ಲಿದ್ದ ಅದರಲ್ಲಿ ಸ್ವರಗಳನ್ನು ಮಿಡಿಸುವದನ್ನು ಕಂಡುಹಿಡಿದರೆ ಅದರಿಂದ ಮಾನವನ ಜ್ಞಾನಶಕ್ತಿ ವಿಕಾಸ ಹೊಂದುವದೆಂದೂ ಹೇಳುತ್ತಾರೆ. ಇದರ ಸಹಾಯದಿಂದಲೇ ಸಂಗೀತದ ಸ್ವರೋತ್ಪಾದಕ ಸಾಹಿತ್ಯಗಳಾದ ವೀಣೆ ಮುಂತಾದವುಗಳನ್ನು ಸಂಶೋಧಿಸಲಾಯಿತೆಂದೂ ಹೇಳುತ್ತಾರೆ.

ಸಂಗೀತದಿಂದ ಭಕ್ತಿಭಾವನೆ ಬೆಳಗುವದೆಂದು ದಾಸರ ಜೀವನದಿಂದ ತಿಳಿದುಕೊಳ್ಳುವಂತಿದೆ. ಪುರಂದರ ದಾಸರಂಥ ಗಾನಕಲಾ ಶಿರೋಮಣಿಗಳು ವೀಣೆ ಬಾರಿಸುತ್ತ ಭಗವಂತನ ಸ್ತುತಿಗಳನ್ನು ಹಾಡುತ್ತ ನಿಂತರೆಂದರೆ ಆ ಭಕ್ತಿಭಾವದ ಗಾನದಲ್ಲೇ ತಲ್ಲೀನರಾಗಿ ಬಿಡುತ್ತಿದ್ದರು. ಇದರಿಂದಲೇ ಅವರು ಭಗವಂತನನ್ನು ಕಾಣಲು ಸಹಾ ಸಮರ್ಥರಾದರು.

ಜನತೆಯ ಮೈತ್ರಿಯನ್ನು ಸಂಪಾದಿಸಲು-ವಿಶಾಲವಾದ ಪ್ರೇಮಮಯ ವಾತಾವರಣವನ್ನು ಬೆಳಗಿಸಲು ಸಂಗೀತವು ಪ್ರಥಮ ಸ್ಥಾನ ಪಡೆದಿದೆ. ಎಂತಹ ಕಠೋರ ಹೃದಯವಿರಲಿ! ಅರಸಿಕ ಅಮಾನುಷನಾಗಿರಲಿ! ಅಂಥವರಲ್ಲಿ ಸಹಾ ತನ್ನ ಆನಂದದ ಸವಿಯಿಂದ ಸುಸಂಸ್ಕೃತಿಯ ಚಿಗುರನ್ನು ಹುಟ್ಟಿಸುವದು.

ದ್ವೇಷ—ಹಿಂಸೆಗಳನ್ನು ನಿರ್ಮೂಲಿಸಲು ಸಂಗೀತವೂ ಒಂದು

ಒಳ್ಳೇ ಸಹಕಾರಿ. ಸಂಗೀತ ಕಲಾಭಿಜ್ಞರೊಡನೆ ಎಲ್ಲರೂ ಸ್ನೇಹದಿಂದಿರುವವರೇ ಹೊರತು ಅವರನ್ನು ಯಾರೂ ದ್ವೇಷಿಸುವುದಿಲ್ಲ. ವಿಷಪೂರ್ಣ ಹೃದಯದ ಕ್ರೂರ ಸರ್ಪದಂತಹ ತಿರ್ಯಕ್ ಪ್ರಾಣಿಗಳೂ ಸಹಾ ಪುಂಗಿಯ ಗಾನಕ್ಕೆ ತಮ್ಮ ಕ್ರೂರಭಾವವನ್ನು ಬಿಟ್ಟ ಉದಾಹರಣೆಗಳಿವೆ. ಎಲ್ಲಿಯಾದರೂ ಸಂಗೀತಕೂಟ ಸೇರುತ್ತದೆಂದರೆ ಮುದುಕರೂ—ಮಕ್ಕಳೂ—ಸ್ತ್ರೀಯರೂ—ಎಲ್ಲರೂ ಅಲ್ಲಿ ಪ್ರೇಮದಿಂದ ಸೇರುತ್ತಾರೆ. ಅಲ್ಲಿಯ ಗಾನ ಕೇಳಿ ಕೇಳಿ ಆಹಾರ ನಿದ್ರೆಗಳ ಕಡೆಗೆ ಸಹಾ ಗಮನಹೋಗದಷ್ಟು ಮನಸ್ಸನ್ನು ಏಕಾಗ್ರಗೊಳಿಸಿ ಮಧುರವಾದ ಆನಂದದ ಸುಧೆಯನ್ನು ನಮಗೆ ಕೊಡುತ್ತಿರುವದು. ಇಂಥ ಆನಂದವನ್ನು ಕರುಣಿಸುವ ಮಹಾ ಶಕ್ತಿ ಈ ಸಂಗೀತದಲ್ಲಿದೆ.

ಪೌರುಷ ಪ್ರಯತ್ನದಿಂದ ಸಾಧಿಸದಂತಹ ಮಹಾಕಾರ್ಯಗಳು ಈ ಸಂಗೀತದಿಂದ ಸಾಧಿಸಿದ ಐತಿಹ್ಯವಿದೆ. ಲಂಕಾಧೀಶ ರಾವಣನು ತನ್ನ ಸಾಮಗಾನದಿಂದಲೇ ಈಶ್ವರನನ್ನು ಮೆಚ್ಚಿಸಿ ತನ್ನ ಅಭೀಷ್ಟವನ್ನು ಸಂಪಾದಿಸಿದ ಕಥೆಯಿದೆ. ಇದರಿಂದ ದೇವರನ್ನು ಮೆಚ್ಚಿಸುವ ತಪಸ್ಸಿಗೂ ಸಂಗೀತವನ್ನು ಉಪಯೋಗಿಸಿದ್ದು ಕಂಡು ಬರುತ್ತದೆ.

ಸಂಗೀತವಿಲ್ಲದ ಮಾನವ ಅರಸಿಕ, ಅಸಂಸ್ಕೃತ. ಅವನ ಜೀವನಕ್ಕೊಂದು "ಮಂಕು" ರೋಗ ಹಿಡಿಯುವದು. ಈ ರೋಗದ ನಿವಾರಣೆಗೆ ಸಂಗೀತ ಅಮೃತದಂತಹ ದಿವ್ಯೌಷಧ. ಮೇಲಾಗಿ ಪದ್ಯಸಾಹಿತ್ಯ ರಚನೆಗೆ ಸಂಗೀತವಿಲ್ಲದಿದ್ದರೆ ಸ್ಫೂರ್ತಿಯೂ ಬರಲಾರದು ಕಾಲಿದಾಸಾದಿ ಮಹಾಕವಿಗಳಲ್ಲಿ ಸಂಗೀತ ಜೀವಂತ ರೂಪುಗೊಂಡಿರದಿದ್ದರೆ ಅವರಿಂದ ಲೋಕೋತ್ತರವಾದ ಕಾವ್ಯಗಳು ಹೊರಬಿದ್ದು ಜನತೆಯ ಬುದ್ಧಿವಿಕಾಸಕ ಕಾರ್ಯಗಳಲ್ಲಿ ಮುಂದುವರಿಯುತ್ತಿದ್ದಿಲ್ಲ. ಸಂಗೀತವು ಜೀವನಕ್ಕೆ ಇಷ್ಟು ಪ್ರಧಾನವಾದ್ದರಿಂದ ಕವಿಯೊಬ್ಬನು— "ಸಾಹಿತ್ಯ ಸಂಗೀತ ಕಲಾವಿಹೀನ: ಸಾಕ್ಷಾತ್ ಪಶು: ಪುಚ್ಛವಿಷಾಣ ಹೀನ:" ಎಂದು ಹಾಡಿದ್ದಾನೆ. ಅರಸಿಕ ಮಾನವನ ಬಾಳು ಸಮಾಜದಲ್ಲಿ ನಿಜವಾಗಿಯೂ ಅಸಹ್ಯ.

ಕಲೆಯಿಲ್ಲದ ಜೀವನ ಪಶುಸದೃಶವಲ್ಲ. ಪಶುಪುಚ್ಛ ಸದೃಶವಲ್ಲ.

ಅಬಕ್ಕೂ ಹೀನ ಎಂದು ಹೇಳಿದ್ದಾನೆ. ಯಾಕೆಂದರೆ ಪಶುಗಳಲ್ಲಿಯೂ ರಸಿಕತೆ ಇದೆ. ಕೊಳಲಗಾನಕ್ಕೆ ಆನಂದಿಸುವ ಸ್ವಭಾವ ಅವರಲ್ಲಿದೆ. ಆದ್ದರಿಂದ ಮಾನವನು ಆ ಕಲಾಭಿಜ್ಞನಾಗಿರದಿದ್ದರೆ ಅವನಿಗೆ ಇನ್ನೇನೆನ್ನ ಬೇಕು?

ಕಲೆಗಳು ಮಾನವನಲ್ಲಿ ನಿಸರ್ಗವಾಗಿಯೇ ಇವೆ. ಹಾಗೆ ಸುಪ್ತ ವಾಗಿದ್ದ ಕಲೆಗಳನ್ನು ಜಾಗ್ರತಗೊಳಿಸಿಕೊಳ್ಳುವದು ಮಾನವನ ಸಾಹಸ. ಅವನು ಸಾಹಸಿಗನಾದರೆ ತನ್ನಲ್ಲಿದ್ದ ಕಲೆಗಳನ್ನು ಬೆಳಗಿಸಿಕೊಂಡು ಸುಸಂಸ್ಕೃತನಾಗಬಹುದು. ಸುಂದರ ಜೀವಿಯೂ ಆಗಬಹುದು.

ಸಂಗೀತವು ಎಲ್ಲ ಪ್ರಾಣಿಗಳಿಗೂ ಪ್ರಿಯವಾಗಿರಲು ಕಾರಣ ಅದರ ಸ್ವರಗಳಲ್ಲಿ ಎಲ್ಲ ಪ್ರಾಣಿಗಳ ಸ್ವರವೂ ಸಂಮಿಶ್ರವಾಗಿರುವದ ರಿಂದ.

ಪುರಾಣ ಕಾಲದಲ್ಲಿ ಸಂಗೀತ ಅತ್ಯಂತ ಉನ್ನತಿ ಹೊಂದಿತ್ತು. ನಾರದ ಮಹರ್ಷಿ ವೀಣಾ ಬಾರಿಸುತ್ತಲೇ ತ್ರಿಲೋಕ ಸಂಚಾರಿಗಳಾಗಿದ್ದರು. ವಾಲ್ಮೀಕಿಯು ಲವ-ಕುಶರಿಗೆ ರಾಮಾಯಣವನ್ನು ಸಂಗೀತ ಪದ್ಧತಿಯಿಂದಲೇ ಕಲಿಸಿದ್ದರು. ಭಗವಾನ್ ಶ್ರೀ ಕೃಷ್ಣನು ಸ್ವತಃ ಮುರಲೀಧರನೆನಿಸಿಕೊಂಡನು. ರಾಜರ ಆಸ್ಥಾನದಲ್ಲಿ ಗಾಯಕರು ಇರ ಹತ್ತಿದ್ದರು. ಇದನ್ನೆಲ್ಲ ತಿಳಿದೇ ಸುಭಾಷಿತ ಕವಿಯೊಬ್ಬನು— “ಅಪಿಬ್ರಹ್ಮ ಪರಾನಂದಾ ದಿದಮಭ್ಯಧಿಕಂ ಧ್ರುವಂ| ಜಹಾರ ನಾರದಾದೀನಾಂ ಚಿತ್ತಾನಿ ಕಥಮನ್ಯಥಾ” ಸಂಗೀತಗಾನದಿಂದ ಬ್ರಹ್ಮಾನಂದ ಕ್ಕಿಂತಲೂ ಹೆಚ್ಚಿಗೇ ಆನಂದವಾಗುತ್ತದೆ. ಇಲ್ಲದಿದ್ದರೆ ನಿತ್ಯವೂ ಬ್ರಹ್ಮ ಜ್ಞಾನವನ್ನು ಸವಿಯುವ ನಾರದನಂಥ ವೈರಾಗ್ಯ ಶಾಲಿಗಳ ಮನಸ್ಸನ್ನು ಹೇಗೆ ಆಕರ್ಷಿಸುತ್ತಿತ್ತು?

ಚಲನಚಿತ್ರದಿಂದ ಸಂಗೀತದ ಬೆಳವಣಿಗೆಗೆ ಇಂದುಎಷ್ಟೋ ಸಹಾಯಕವಾಗಿದೆ. ಮನಸ್ಸಿನ ಮೇಲೆ ತೀವ್ರವಾಗಿ ಸಂತೋಷವನ್ನುಂಟು ಮಾಡುವದರಲ್ಲಿ ಸಂಗೀತದಂತಹ ಸರ್ವೋತ್ತಮ ಸಾಧನ ನಮಗೆ ಬೇರೊಂದಿಲ್ಲ. ಆದಕ್ಕಾಗಿಯೇ ನಮ್ಮಲ್ಲಿ ಶ್ರಮದ ಕೆಲಸಮಾಡುವಾಗ —ಸ್ತ್ರೀಯರು ಬೀಸುವಾಗ—ಒಂಟಿಗರಾಗಿ ತಿರುಗಾಡುವಾಗ ಕುರು

 

ಬರು ಕುರಿಗಳನ್ನು ಕಾಯುವಾಗ ಏನಾದರೊಂದು ಸಂಗೀತದ ಹಾಡನ್ನು ಹಾಡುತ್ತಿರುವ ಪರಿಪಾಠವು ರೂಢಿಯಲ್ಲಿದೆ. ಯಾಕೆಂದರೆ ಇದರಿಂದ ಮನಸ್ಸಿಗೆ ಹೆಚ್ಚು ಶ್ರಮವೇ ಎನಿಸಲಾರದು.

ಹಿಂದಿನ ಮತ್ತು ಇಂದು ಬೆಳೆದ - ಬೆಳೆಯುತ್ತಿರುವ ಪದ್ಯ ಸಾಹಿತ್ಯಕ್ಕೆಲ್ಲ ಈ ಸಂಗೀತ ಜೀವಾಳವೆನಿಸಿದೆ. ಅದನ್ನು ಬೆಳಗಿಸಿಯೂ ಅದೆ.

ಕಾಲ - ದೇಶ— ಭೇದಗಳಿಂದ ಸಂಗೀತದಲ್ಲೂ ಕೆಲವು ಭೇದಗಳಿವೆ. ಆದರೆ ಅವು ನಿರ್ಮಲವಾದ ಮೂಲ ಕಲೆಗೆ ಯಾವ ಕಲಂಕವನ್ನೂ ತರಲಾರವು.

ಭಾರತದ ಈ ಅಪೂರ್ವ ಕಲೆಯಾದ ಸಂಗೀತವನ್ನು ಬೆಳಗಿಸಲು ಭಾರತೀಯರೆಲ್ಲರೂ ಪ್ರಯತ್ನಿಸಬೇಕು. ಇದನ್ನು ಕಲಿಯುವದು— ಕಲಿಸುವದು - ವಿರಾಮ ಕಾಲದಲ್ಲಿ ಭಗವಂತನ ಸ್ತುತಿಗಳನ್ನು ಹಾಡುವದು ಕೇಳುವದು ಇವೆಲ್ಲವೂ ನಮ್ಮ ಜೀವನಕ್ಕೆ ಅವಶ್ಯವಾಗಿವೆ.

## ೫ ಚಿತ್ರಕಲೆ

ಜೀವನನ ಪ್ರಗತಿಗಾಗಿ ನಿರಂತರವೂ ಪ್ರಯತ್ನಿಸುವ ಕಲೆಗಳಲ್ಲಿ ಚಿತ್ರಕಲೆಗೂ ಒಂದು ಮಹತ್ವದ ಸ್ಥಾನ ಕೊಡಲೇ ಬೇಕು. ಜನಾಂಗಕ್ಕೆ ತನ್ನಿಂದಾಗಬಹುದಾದ ಸೇವೆ ಸಲ್ಲಿಸಲು ಅದು ಇಂದಿಗೂ ಹಿಂದುಳಿಯಲಿಲ್ಲ. ಪ್ರೀತಿ ವಿಶ್ವಾಸಗಳನ್ನು ಹೆಚ್ಚಿಸಿಕೊಂಡು ಅನಂತ ಜೀವಿಗಳನ್ನು ಮೆಚ್ಚಿಸಿಕೊಂಡು ಪ್ರಗತಿಯಲ್ಲಿ ಸಾಗುತ್ತಲಿದೆ. ಇದು ಜೀವನ ವಿಕಾಸದ ಶುಭ ಸೂಚನೆ.

ಮಾನವನೆಂದು ಸೃಷ್ಟಿಯಾದನೋ— ಅವನಿಗೆ ತನ್ನ ಜೀವನದ ಸುಖಸೌಕರ್ಯ--ಆಶೆ-ಆಕಾಂಕ್ಷೆಗಳಿಗಾಗಿ ಎಂದಿಗೆ ಅರಿವುಂಟಾಯಿತೋ? ಅಂದೇ ಇಂಥ ಕಲೆಗಳೂ ಕಾಣಿಸಿಕೊಂಡವು. ಇವನ್ನಿಂದು ನಾವು ಹೊಸದಾಗಿ ಸೃಷ್ಟಿಸಿಕೊಳ್ಳಬೇಕಾಗಿಲ್ಲ. ಮನೋಭೂಮಿಕೆಯಲ್ಲಿ ನಿಸರ್ಗಸಿದ್ಧವಾಗಿರುವ ಅಭಿರುಚಿ ಪ್ರೇಮಗಳನ್ನೇ ಬದುಕಿಸಿ ಬೆಳಗಿಸಿಕೊಳ್ಳುವದು ಮಾತ್ರ ನಮ್ಮ ಕೆಲಸ. ಅದೇ ಕಲೆಗಳ ಉನ್ನತಿ. ಜೀವನದ ಪ್ರಗತಿ

ಚಿತ್ರಕಲೆ ಪ್ರಾಚೀನತಮವಿದ್ದೆಂದು ಹೇಳಲು ನಮ್ಮಲ್ಲಿರುವ ಮೂರ್ತಿಪೂಜೆಯು ಪ್ರಮಾಣವೊಂದೇ ಸಾಕು. ವೈದಿಕ ಸಾಹಿತ್ಯದಲ್ಲಿ ಚಿತ್ರಗಳನ್ನು ಸುಂದರವಾಗಿ ರಚಿಸುವ ವಿಧಾನ ಸಾಧನಗಳು ಹೇಳಲ್ಪಟ್ಟವೆ.

ಸಾಹಿತ್ಯ–ಸಂಗೀತಗಳಂತೆ ಕಂಡಸ್ಥ ಕಲೆಯಲ್ಲ ಚಿತ್ರಕಲೆ. ಅದರಿಂದ ಇದನ್ನು ಸುರಕ್ಷಿತವಾಗಿ ಕಾದುಕೊಳ್ಳುವದು ಒಳ್ಳೇ ಪ್ರಯಾಸಕರ. ಸಾಹಿತ್ಯ ಸಂಗೀತಗಳು ದೃಗ್ಗೋಚರವಲ್ಲದ್ದರಿಂದ ಸಣ್ಣ ಪ್ರಮಾಣದಲ್ಲಾದರೂ ಅದನ್ನು ರಕ್ಷಿಸಿಕೊಳ್ಳಬಹುದು. ಚಿತ್ರಕಲೆಗೆ ಹಾಗಲ್ಲ. ರೂಪು ಆಕಾರಗಳೇ ಬೇಕು. ಇದರಿಂದ ವೈರಿಗಳ ಆಘಾತವನ್ನು ಒಮ್ಮೊಮ್ಮೆ ಸಹಿಸಬೇಕಾಗುವದು. ಮಧ್ಯಕಾಲದ ಮಹಮ್ಮದೀಯರ ಹಾವಳಿಯಲ್ಲಿ ಚಿತ್ರಕಲೆ ಸಹಿಸಿದ ದುಃಖ ಅಷ್ಟಿಷ್ಟಲ್ಲ. ಸರ್ವಾಂಗ ಸುಂದರವೆನಿಸಿದ ಚಿತ್ರಕಲೆಯು ಎಷ್ಟೋ ಜೀವಂತ ರೂಪುಗಳಾದ ದೇವಾಲಯಗಳು ಮಣ್ಣುಪಾಲಾಗಿ ಹೋದವು. ಅವರಿಂದ "ತಾಜಮಹಲಿ" ನಂತಹ ಕಟ್ಟಡಗಳು ಕಟ್ಟಲ್ಪಟ್ಟರೂ ಆ ಕಾಲದಲ್ಲಿ ಭಿನ್ನವಾಗಿದ್ದು ಕಣ್ಣೀರು ಸುರಿಸುತ್ತಿದ್ದ ಎಷ್ಟೋ ಚಿತ್ರಗಳನ್ನು ನೋಡಿದಾಗ ಚಿತ್ರಕಲೆ ಸಾಕಷ್ಟು ಉನ್ನತ ಸ್ಥಿತಿಯಲ್ಲಿ ಇರಲಿಲ್ಲವೆಂದು ಹೇಳಬಹುದು. ಅದೊಂದು ಚಿತ್ರಕಲೆಯ ಭಯಂಕರ ಗ್ರಹಣಕಾಲ!

ಭಗವಂತನಲ್ಲಿ ಕಲಾ ಉಪಾಸಕರು ಬೇಡಿಕೊಂಡ ಪರಿಣಾಮವಾಗಿಯೋ ಕಲಾ ಸುದೈವದಿಂದಲೋ ಪುನಃ ಅದರ ಬೆಳವಣಿಗೆಯ ಕಾಲ ಪ್ರಾರಂಭವಾಯಿತು. ರಾಜಾ ರವಿವರ್ಮ ಮುಂತಾದ ಕಲಾವಂತರು ಚಿತ್ರಕಲೆಯ ಪ್ರಭಾವವನ್ನು ಜಗತ್ತಿಗೇ ತೋರಿಸಿಕೊಟ್ಟರು. ಅದರ ಸತ್ಪರಿಣಾಮವನ್ನು ಖಚಿತಪಡಿಸಿದರು.

ಚಿತ್ರಗಳನ್ನು ನೋಡುವದರಿಂದ ಅದರಲ್ಲಿದ್ದ ಭಾವನಾತರಂಗಗಳೇ ನಮ್ಮ ಹೃದಯದಲ್ಲೂ ಪ್ರತಿಬಿಂಬಿಸುತ್ತವೆ. ಹಿಂದಿನ ಕಾಲದ ರಾಮಕೃಷ್ಣಾದಿಗಳ ಚಿತ್ರವು ಮನಸ್ಸನ್ನು ಆನಂದಗೊಳಿಸುವುದು. ಹಾಗೆಯೇ ಇಂದಿನ ಕಾಲದ ರಾಣಾಪ್ರತಾಪಸಿಂಹ, ಶಿವಾಜೀ, ಸುಭಾಷ ಮುಂತಾದವರ ಚಿತ್ರವು ಹೇಡಿತನವನ್ನು ನಿರ್ಮೂಲನಗೊಳಿಸಿ ಶರೀರ

ದಲ್ಲಿ ವೀರತನವನ್ನು ಉಜ್ಜೀವನಗೊಳಿಸುವದು. ಸ್ವಾಮಿ ವಿವೇಕಾನಂದ ಗಾಂಧೀಜೀಯವರ ಚಿತ್ರವು ಅಹಿಂಸೆ—ಸತ್ಯ—ಶಾಂತಿಗಳನ್ನು ಸಾರುತ್ತಿರುವದು. ರಾಜಾ ರವಿವರ್ಮರು ಬಡೋದೆಯ ಅರಮನೆಯ ಗೋಡೆಯ ಮೇಲೆ ತೆಗೆದ ಚಿತ್ರವನ್ನು ಕಂಡು ಒಬ್ಬರು ಹೀಗೆ ಅಭಿಪ್ರಾಯ ಬರೆದಿರುವರು—ಅವು ದರ್ಶನೀಯವಾಗಿರುವವಲ್ಲದೆ ಪುರಾಣ ಕಾಲದ ನೆನಪನ್ನು ತಂದುಕೊಡುತ್ತವೆ. ದೇಶಾಭಿಮಾನಿಗಳಾದ ಐತಿಹಾಸಿಕ ಪುರುಷರ ಚಿತ್ರಗಳನ್ನು ನೋಡಿ ಸ್ಫೂರ್ತಿಯುಂಟಾಗುತ್ತದೆ. ಸಾಧುಸಂತರ ಪ್ರಸಾದ ಚಿನ್ಹವುಳ್ಳ ಗಂಭೀರವಾದ ಮುದ್ರೆಯನ್ನು ನೋಡಿ ಪೂಜ್ಯಭಾವವೂ ವಿವೇಕ ಬುದ್ಧಿಯೂ ಪ್ರಜ್ವಲಿಸುತ್ತದೆ.

ಭಾರತ ಕಾಲದ ಏಕಲವ್ಯನೆಂಬೊಬ್ಬ ಧನುರ್ವಿಧ್ಯಾಕಾಂಕ್ಷಿಯಾದ ಪುರುಷನೊಬ್ಬನು ಆಚಾರ್ಯ ದ್ರೋಣರಲ್ಲಿಗೆ ಹೋಗಿ ವಿದ್ಯೆಯನ್ನು ಬೇಡಿದನು. ಆಚಾರ್ಯರು ಅದಕ್ಕೊಪ್ಪಲಿಲ್ಲ. ಅನಂತರ ಏಕಲವ್ಯನು ಆಚಾರ್ಯರ ಚಿತ್ರವನ್ನು ಚಿತ್ರೀಕರಿಸಿಕೊಂಡು ಭಕ್ತಿ-ವಿಶ್ವಾಸಗಳಿಂದ ಅವರನ್ನೇ ನೋಡುತ್ತ ತನ್ನ ಅಭ್ಯಾಸವನ್ನು ಪ್ರಾರಂಭಿಸಿದನು. ಇದರಿಂದ ಆಚಾರ್ಯರ ಚಿತ್ರ ಇವನ ಅಂತರಂಗದಲ್ಲಿ ಮೂಡಿತು. ಅವನ ಧನುರ್ವಿದ್ಯೆಯೂ ರೂಪಿಸಿತು

ಜನಾಂಗದ ಸಂಸ್ಕೃತಿ ಸಭ್ಯತೆಗಳ ಸುಧಾರಣೆಗೆ ಬೆಳವಣಿಗೆಗೆ ಚಿತ್ರವೂ ಸಹಾಯ ನೀಡಿದೆ. ಎಷ್ಟೋ ಶಿಲಾಶಾಸನ—ಶಿಲಾಚಿತ್ರಗಳಿಂದಲೇ ನಮ್ಮಲ್ಲಿಯ ರೂಢಿ ಸಂಪ್ರದಾಯಗಳಲ್ಲೂ ಆಚಾರ—ವಿಚಾರಗಳಲ್ಲೂ, ಪರಿವರ್ತನೆಯಾಗಿದೆ. ಇಂತಹ ತತ್ವಗಳನ್ನು ತೋರಿಸುವ ಚಿತ್ರಗಳು ವಿಜಯನಗರ ಹಂಪೆ ಆ ಕಡೆಗೆ ಕಾಣಬಹುದು. ಕರ್ನಾಟಕದ ಕೆಳದಿ-ಬೇಲೂರುಗಳ ಚಿತ್ರಗಳೂ ಅಸಾಧಾರಣವಾಗಿವೆ. ನಮ್ಮ ದಕ್ಷಿಣೋತ್ತರ ಕನ್ನಡ ಜಿಲ್ಲೆಯಲ್ಲಿದ್ದ ಯಕ್ಷಗಾನ—ನೃತ್ಯ-ವೇಷಗಳಿಗೆ ಗೋದಾವರೀ ತೀರದಲ್ಲಿದ್ದ ಶಿಲಾಚಿತ್ರಗಳೇ ಕಾರಣವೆಂದೂ ಅವುಗಳಿಂದಲೇ ಅದರ ಸುಧಾರಣೆಯಾಯಿತೆಂದೂ ಹೇಳುತ್ತಾರೆ.

ಇತ್ತೀಚೆಗೆ ವಿಜ್ಞಾನದ ಸಂಶೋಧನೆ ಪ್ರಾರಂಭವಾದಂದಿನಿಂದ

ಚಿತ್ರಗಳಿಗೂ ಅನುಕೂಲ ಕಾಲ ಪ್ರಾರಂಭವಾಯಿತೆನ್ನಲಡ್ಡಿಯಿಲ್ಲ. ಚಿತ್ರಗಳ ಸುಧಾರಣೆ–ಸೌಂದರ್ಯ--ಭಾವ--ಲಕ್ಷಣಗಳ ಕಡೆಗೆ ಭಾರೀ ಗಮನ ಕೊಡಲಾಗಿದೆ. ಅವುಗಳ ಪ್ರಸಾರಕ್ಕಾಗಿ ಯಾಂತ್ರಿಕ ಸಾಧನಗಳನ್ನೂ ಉಪಯೋಗಿಸಿಕೊಳ್ಳಲಾಯಿತು. ಇದರಲ್ಲಿ ಜರ್ಮನಿ-ಅಮೇರಿಕಾ ಅಗ್ರಸ್ಥಾನ ವಹಿಸಿದವು. ಬೇಕಾಗಿದ್ದ ಬೇಕಾದಷ್ಟು ಚಿತ್ರಗಳನ್ನು ನಮಗೆ ನೋಡಲು ಅನುಕೂಲ ದೊರಕಿತು.

ಸಂಶೋಧನೆಯು ಇಷ್ಟಕ್ಕೇ ನಿಲ್ಲಲಿಲ್ಲ. ಎಲ್ಲಾ ಕಲೆಗಳನ್ನೂ ಕೇಂದ್ರೀಕರಿಸಿ ಚೈತನ್ಯವಿಲ್ಲದ ನಿರ್ಜೀವಿ ಚಿತ್ರಗಳನ್ನೂ ಜೀವಂತವಾಗಿ ನವ ಚೈತನ್ಯದಿಂದ ತುಂಬಿಸುವ ಸಾಹಸವೂ ನಡೆಯಿತು. ಇದೇ ಚಲನ ಚಿತ್ರದ ಮಹಾ ಉದ್ಯಮ.

ಇದರಲ್ಲಿ ಸಾಹಿತ್ಯ-ಸಂಗೀತ-ನೃತ್ಯ-ಮುಂತಾದ ಎಲ್ಲ ಕಲೆಗಳಿಗೂ ಆಶ್ರಯವಿದೆ. ಅವೆಲ್ಲವನ್ನೂ ಪೋಷಿಸಿಕೊಳ್ಳುತ್ತಿದೆ. ಇದರ ಪ್ರಭಾವದಿಂದ ಇನ್ನೊಂದು ದೇಶವನ್ನು ಅಲ್ಲಿಯ ಕೈಗಾರಿಕೆ, ವ್ಯವಸಾಯದ ಉದ್ಯಮ ಜನಾಂಗದ ಸ್ವಭಾವ-ಸ್ವರೂಪ-ಧರ್ಮ-ನೀತಿ ಇವೆಲ್ಲವನ್ನೂ ಸುಲಭವಾಗಿ ಕಾಣಬಹುದು. ಜೋಗದ ಜಲಪಾತವನ್ನು ಇನ್ನೊಂದು ಕಡೆಗೆ ಒಯ್ಯಬಹುದು. ಅಲ್ಲಿಯ ರಮಣೀಯ ದೃಶ್ಯವನ್ನು ಇಲ್ಲಿಗೆ ತಂದುಕೊಳ್ಳಬಹುದು. ಕೈಗಾರಿಕೆಯ ಬಗೆಬಗೆಯ ವಿಧಾನ ಸಾಧನೆಗಳನ್ನೂ ಇದರಲ್ಲಿ ಮಾರ್ಪಡಿಸಿಕೊಂಡು ಜನಾಂಗಕ್ಕೆ ಬೋಧಿಸಬಹುದು. ಇದೆಂತಹ ಸೌಲಭ್ಯದ ಸೌಕರ್ಯದ ಸುಂದರ ಪ್ರಚಾರಣೆ! ಜನಾಕರ್ಷಣೀಯ ವಿಚಾರ ಪ್ರಚೋದನೆಯ ಸಾಧನೆ!!

ಜನಜೀವನದ ಪ್ರಗತಿಗೆ ಜನಾಂಗದಲ್ಲಿ ಜಾಗೃತಿಯನ್ನು ಹುಟ್ಟಿಸಲು ಬೇಕಾದ ರೀತಿಯಲ್ಲಿ ಅದನ್ನು ವಿಕಾಸಗೊಳಿಸಲು ಇಂತಹ ಚಿತ್ರಗಳ ಉದ್ಯಮ ನಮಗಿಂದು ಅಗತ್ಯಬೇಕಾಗಿದೆ ನಾಡಿನ ಸತ್ಯ ಸಂಸ್ಕೃತಿಯ ನಿತ್ಯ ನೂತನದ ತತ್ವ ವಿಚಾರಗಳನ್ನು ಜನಮೆಚ್ಚುವ ರೀತಿಯಲ್ಲಿ ಹೃದಯಂಗಮವಾಗಿ ಪ್ರಚೋದನೆಯನ್ನುಂಟುಮಾಡುವ ಕಾರ್ಯದಲ್ಲಿ ಇಂತಹ ಚಿತ್ರಗಳಷ್ಟು ಯಶಸ್ವಿಯಾಗಬಲ್ಲವು ಇನ್ನಾವುದೂ ಇಲ್ಲ. ಬಾಹ್ಯ ನೋಟದಿಂದ ಅಂತರಂಗ

ದಲ್ಲಿ ತೀವ್ರವಾಗಿ ಕ್ರಿಯೆಯನ್ನುಂಟುಮಾಡುವ ಸಾಮರ್ಥ್ಯ ಇವಕ್ಕಿರುವಷ್ಟು ಇನ್ನಾವುದಕ್ಕೂ ಇಲ್ಲ.

ಇತರ ದೇಶಗಳ ದೃಷ್ಟಿಯಿಂದ ಭಾರತದಲ್ಲಿ—ಇದೊಂದು ಚಲಚ್ಚಿತ್ರ ಉದ್ಯಮ ಸಾಕಷ್ಟು ಮುಂದರಿದಿಲ್ಲ. ಇದರಿಂದ ಆಯಾ ದೇಶೀಯರು ಪಡಕೊಂಡಷ್ಟು ಪ್ರಯೋಜನ ನಮ್ಮಲ್ಲಿಯವರೂ ಪಡಕೊಂಡಿಲ್ಲ. ಲಂಡನ್ನಿನಲ್ಲಿ ಪ್ರತಿವರ್ಷ ನಡೆಯುತ್ತಿರುವ ಚಿತ್ರಪ್ರದರ್ಶನಗಳ ಅಧಿವೇಶನವೇ ಇದಕ್ಕೆ ಸಾಕ್ಷಿ! ಇಲ್ಲಿಯ ಬೆಳವಣಿಗೆಯ ಹೆಗ್ಗುರುತು.

ಇಂದಿನ ಸ್ವತಂತ್ರ ಭಾರತದಲ್ಲಿ ಭಾರತೀಯರ ಜೀವನವನ್ನು ಆದರ್ಶವೂ ಅಮರವೂ ಆಗಿ ಇರಿಸುವಂತಹ ಸರ್ವೋತ್ತಮ ಮಾರ್ಗದರ್ಶಿಯಾದ ಚಿತ್ರಗಳ ಸೃಷ್ಟಿ—ಬೆಳವಣಿಗೆ ಇವು ಆಗಲೇಬೇಕಾದದ್ದು ಅಗತ್ಯ. ಆಯಾ ಕಾಲದ ಜೀವನಕ್ಕೆ ಬೇಕಾದ—ಬೇಕಾಗುವಂತಹ ವಿಚಾರದ ಚಿತ್ರಗಳನ್ನು ನಿರ್ಮಿಸುವದರಲ್ಲಿ ಚಿತ್ರಗಾರರು ಹಿಂದುಳಿಯಬಾರದು. ಚಿತ್ರನಿರ್ಮಾಣಕರಿಂದ ಅಂತಹದೇ ಚಿತ್ರಗಳು ಸೃಷ್ಟಿಯಾಗಲಿ! ಜನಜೀವನವು ಪ್ರಗತಿಯ ದೃಷ್ಟಿಯಿಂದ ಪರಿವೇಷ್ಟಿತವಾಗಿರಲಿ!

## ೬ ಚಲನಚಿತ್ರ (ಸಿನೀಮಾ)

ಚಲನಚಿತ್ರದ ವಿಷಯವಾಗಿ ಹಿಂದೆಯೇ ಒಂದೆರಡು ಮಾತ್ರ ಹೇಳಿದ್ದರೂ ಅದನ್ನೇ ಇಲ್ಲಿಯೂ ಮುಂದರಿಸಲಾಗಿದೆ.

ಈ ಚಿತ್ರಗಳನ್ನು ಅಭ್ರಕದ ಫಿಲಂನಲ್ಲಿ ಚಿತ್ರಿಸಿ ವಿದ್ಯುತ್ತಿನ ಸಹಾಯದಿಂದ ರಜತಪರದೆಯ ಮೇಲೆ ಪ್ರತಿಬಿಂಬಿಸುವದನ್ನು ಕಾಣಬಹುದು ಆದರೆ ಇದು ಕೈಗಾರಿಕೆಯ ಚಿತ್ರವಲ್ಲ; ಯಾಂತ್ರಿಕ ಚಿತ್ರ.

ಇಂದಿನ ಜನಮೆಚ್ಚಿಗೆಯ ಕಲೆಗಳಲ್ಲಿ ಚಲನಚಿತ್ರಕ್ಕೆ ಹೆಚ್ಚಿನ ಸ್ಥಾನ ಕೊಡಬಹುದಾಗಿದೆ. ಅದು ಜನಸೇವೆಗಾಗಿ ಸಲ್ಲಿಸುತ್ತಿರುವ ಸೇವೆಯೂ ಅಷ್ಟಿಷ್ಟಲ್ಲ. ವಿಶ್ರಾಂತಿಯಿಲ್ಲದೇ—ವ್ಯಾಕುಲಪಡದೇ—ಬೇಸರಹೊಂದದೇ ನಿರಂತರವೂ ದುಡಿಯುತ್ತಿದೆ. ಕಣ್ಮನಗಳನ್ನು

ತೃಪ್ತಿಪಡಿಸಿ ಕಿವಿಗೊಂದು ಅಮೃತ ರಸಾಯನವನ್ನುಣ್ಣಿಸಿ ಹೃದಯ ಕ್ಕೊಂದು ಆನಂದವನ್ನು ತರುವದು.

ಜಾತಿಮತಗಳ ಗೊಂದಲ ಇದಕ್ಕಿಲ್ಲ. ಶತ್ರುಮಿತ್ರರೆಂಬ ಭೇದವಿಲ್ಲ. ಸ್ವದೇಶ ವಿದೇಶಗಳೆಂಬ ಮಾತ್ಸರ್ಯವಿಲ್ಲ. ಸ್ವಕೀಯ ಪರಕೀಯರೆಂಬ ಕ್ಷುದ್ರ ತಾರತಮ್ಯತೆ ಇಲ್ಲ. "ಸರ್ವಭೂತೇಷು ಸಮದರ್ಶೀ" ಎನ್ನುವ ವಿಶಾಲ ಭಾವನೆ ಹೃದಯದಲ್ಲಿ ತುಂಬಾ ತುಂಬಿಕೊಂಡಿದೆ ಇದೇ ಅದರ ಪವಿತ್ರ ಧರ್ಮ.

ಇದರ ಸೇವೆ ಒಂದಲ್ಲ. ಎರಡಲ್ಲ. ಎಲ್ಲರೂ ಪ್ರೀತಿಪಡುವ ಹಲವು ಸೇವೆಗಳು. ಜೀವನದ ಭಿನ್ನ ಭಿನ್ನ ಪ್ರವೃತ್ತಿ—ವಿಚಾರಗಳಿಗೆ ಧೈರ್ಯ ದಿಂದ ಸಮಾಧಾನ ಕೊಡುವದು ಈ ಕಲೆ.

ಸಾಹಿತಿಗಳೆನ್ನುತ್ತಾರೆ. "ಜೀವನ ವಿಕಾಸಕ್ಕೆ ಸಾಹಿತ್ಯ ಬೇಕು. ಸಾಹಿತ್ಯವೇ ಇದರ ಜೀವಾಳ" ಎಂದು. ಈ ಸಾಹಿತ್ಯ ಸೇವೆಯಲ್ಲಿ ಚಲನ ಚಿತ್ರ ಹಿಂದುಳಿಯಲಿಲ್ಲ. ಧಾರ್ಮಿಕರು ಹೇಳುತ್ತಾರೆ-"ಜೀವನದ ಉಸಿರೇ ಧರ್ಮ. ಪ್ರಪಂಚದ ಧಾರಣೆ ಪೋಷಣೆಗಳ ಅಖಂಡ ಶಕ್ತಿ ಧರ್ಮ. ಧರ್ಮದ ಉದ್ಧಾರದಿಂದಲೇ ಲೋಕ ಕಲ್ಯಾಣ" ಎಂದು. ಈ ಸಿದ್ಧಾಂತ ಕ್ಕಾದರೂ ಸೇವೆ ಸಲ್ಲಿಸಲು ಹಿಂದುಳಿಯಲಿಲ್ಲ. ಸತ್ಯದ ಶ್ರೇಷ್ಠ ಸ್ಥಾನ ಮಾನ-ಜೀವನದಲ್ಲಿ ಅದು ಎಷ್ಟು ಅಗತ್ಯ ಅದರ ರಕ್ಷಣೆಯನ್ನು ಬೋಧಿ ಸಲು "ಹರಿಶ್ಚಂದ್ರ" ಬೆಳಗುತ್ತಿದೆ. ಅಸತ್ಯ-ಅನ್ಯಾಯ ಕೊಲೆ-ಸುಲಿಗೆ ಗಳು ಎಷ್ಟು ಭಯಾನಕವೆನ್ನುವುದನ್ನೂ-ಜೀವನವೂ ಇದರಿಂದ ಹಾಳಾಗು ವದನ್ನೂ ನೈತಿಕ ಶಕ್ತಿ ತುಂಬಿದ್ದರೆ ಸೂಳೆಯ ಜೀವನದಲ್ಲಿ ಸಹಾ ಎಂತಹ ಪವಿತ್ರ ಪಾತಿವ್ರತ್ಯ ಇರುವುದೆನ್ನುವದನ್ನೂ ಹೇಳಲಿಕ್ಕೆ "ವಸಂತ ಸೇನೆ"ಯೊಂದೇ ಸಾಕು.

ಭಕ್ತಿಯಿಂದಲೇ ಮುಕ್ತಿ ಎಂದು ನೆನೆಯುವ ಪರಮಾತ್ಮ ಭಕ್ತರಿಗೆ ದಾಸವರ್ಯರಿಗೆ ಭೂ ಕೈಲಾಸ-ತಿರುಪತಿ ವೆಂಕಟರಮಣ—ಪುರಂದರ ದಾಸ—ಭಕ್ತ ಕುಂಬಾರ-ಮುಂತಾದ ಚಿತ್ರಗಳು ಹಬ್ಬದ ರಸದೂಟ ವನ್ನು ಉಣ್ಣಿಸಿವೆ. ಅವರ ಭಕ್ತಿ ಭಾವನೆಯನ್ನು ಸಮೃದ್ಧವಾಗಿ ಪೋಣಿಸಿವೆ.

ಇಷ್ಟೇ ಸೇವೆಗಳಿಂದ ತೃಪ್ತಿಯಾಗಿಲ್ಲ ಚಲನಚಿತ್ರಕ್ಕೆ. ವಿವಿಧ ಕೈಗಾರಿಕೆ—ರಾಷ್ಟ್ರೀಯ ವಿಚಾರ—ಮುಂತಾದವುಗಳಲ್ಲೂ ಮುಂದುವರಿದಿದೆ. ಒಂದು ವಿಷಯವನ್ನು ಓದುವದು ಕೇಳುವದು—ಇದಕ್ಕಿಂತಲೂ ಆ ವಿಷಯವನ್ನು ಜೀವಂತವಾಗಿ ನೋಡುವದರಿಂದ ಹೆಚ್ಚು ಪರಿಣಾಮಕಾರಿಯೆಂದು ಹೇಳುತ್ತಾರೆ. ಸಾವಿರಾರು ವರ್ಷಗಳ ಹಿಂದೆ ನಡೆದ ಘಟನೆಗಳನ್ನು ಕಲ್ಪನಾತರಂಗಳಿಂದ ನಿರ್ಮಿಸಿಕೊಂಡದ್ದಕ್ಕಿಂತಲೂ ಅದೇ ಚಿತ್ರವನ್ನು ನೋಡುವದರಿಂದ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ರೂಪುಗೊಳ್ಳುವದು ಆದರೆ ಈ ದೃಷ್ಟಿಯಿಂದ ನೋಡುವವರೂ - ಪ್ರೀತಿಸುವವರೂ ತೀರ ವಿರಳ. ಕೇವಲ ವಿನೋದ ತೃಪ್ತಿಗಾಗಿ ಮಾತ್ರವೇ ಬಳಸಿಕೊಳ್ಳುತ್ತಿದ್ದಾರೆ. ಇದು ಮಾತ್ರ ವಿಷಾದಕರ!

ಆದರೆ ಎಷ್ಟೋ ಚಿತ್ರಗಳನ್ನು ನೋಡಿದಾಗ ಚಿತ್ರ ನಿರ್ಮಾಣಕರು ಚಿತ್ರದಲ್ಲಿ ಶೃಂಗಾರ ರಸದ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸಿದಂತಿದೆ. ಇದರಿಂದ ಮುಂದಿನ ಜನಾಂಗವಾಗತಕ್ಕ ಇಂದಿನ ಮಕ್ಕಳ ಮನಸ್ಸನ್ನು ಚಾಂಚಲ್ಯಗೊಳಿಸಿ ದುಃಷ್ಪರಿಣಾಮವನ್ನುಂಟು ಮಾಡಬಹುದು. ಆದ್ದರಿಂದ ಶಿಕ್ಷಕರು ಆ ಕಡೆಗೆ ಹೆಚ್ಚು ಗಮನಕೊಡಬೇಕು. ಚಿತ್ರನಿರ್ಮಾಣಕರೂ ಜನಮೆಚ್ಚುವರೆಂದು ಪೂರ್ಣವಾಗಿ ಚಿತ್ರದ ಆದ್ಯಂತವೂ ಶೃಂಗಾರವನ್ನೇ ಬಳಸಿಕೊಳ್ಳುವುದು ಉಚಿತವಲ್ಲ.

ಹಾಗೆಯೇ ಕಥೆಗಳಲ್ಲಿ ಅಸ್ವಾಭಾವಿಕತೆ ಬೆರಸಿಕೊಳ್ಳಬಾರದು ಪೌರಾಣಿಕ ಚಿತ್ರಗಳಲ್ಲಿ ಸ್ವಾತಂತ್ರ್ಯ ವಹಿಸಿ ಮುಂದರಿಯುವದರಿಂದ—ಸಂಬಂಧ ತಾರತಮ್ಯತೆಯಿಲ್ಲದ ಬೇರೇ ಸನ್ನಿವೇಶಗಳನ್ನು ಅದರಲ್ಲಿ ತರುವದರಿಂದ—ಚಿತ್ರಕ್ಕೆ ವಿರಸವಾಗುವದು. ರಸಭಾವಗಳ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸುವದು ಅವಶ್ಯ.

ಚಲನಚಿತ್ರ ದಿನದಿನಕ್ಕೆ ಬೆಳೆಯಬೇಕು. ಅಭಿವೃದ್ಧಿ ಹೊಂದಬೇಕು. ನಮ್ಮ ಜೀವನಕ್ಕೆ ಬೇಕಾದ ಎಲ್ಲ ವಿಷಯಗಳೂ ಅದರಲ್ಲಿ ರೂಪುಗೊಳ್ಳಬೇಕು. ಇಂದಿನ ಜನ ಪತ್ರಿಕೆ—ಭಾಷಣಗಳಿಗಿಂತಲೂ ಸಿನೀಮಾ ಹೆಚ್ಚು ಪ್ರೀತಿಯಿಂದ ನೋಡುತ್ತಾರೆ. ಸಣ್ಣ ಮಕ್ಕಳಿಗೆ ಔಷಧಿ ಕುಡಿಸುವಾಗ ಸಕ್ಕರೆ-ಹಾಲು ಮುಂತಾದ ಪ್ರೀತಿಯ ವಸ್ತುವಿ

ನಲ್ಲಿ ಮಿಶ್ರಣಮಾಡಿ ಕೊಟ್ಟಂತೆ ನಮ್ಮ ಜನಕ್ಕೂ ನಮ್ಮ ಜೀವನ ಪ್ರಗತಿಯ ವಿಷಯಗಳನ್ನು ಇಂಥವುಗಳಿಂದಲೇ ಒದಗಿಸಿದರೆ ಹೆಚ್ಚು ಹಿತಕಾರಿ. ನಿರ್ಮಾಣಕರ ದೃಷ್ಟಿ ಈ ಕಡೆಗೆ ಹೊರಳಲಿ!

## ೭ ಶಿಲಾ ಶಿಲ್ಪಕಲೆ

ಎಲ್ಲ ಕಲೆಗಳಿಗಿಂತಲೂ ಹೆಚ್ಚು ಅವನತಿ ಹೊಂದಿಕೊಂಡು ನಾಲ್ಕು ಮಾತು ಬರೆಯಿಸಿಕೊಳ್ಳವಷ್ಟೂ ಚೈತನ್ಯವಿಲ್ಲದಾಗಿದೆ ಶಿಲ್ಪ ಕಲೆಗೆ. ಹೇಳ ಹೆಸರಿಲ್ಲದಷ್ಟು ಇವುಗಳ ಮೇಲೆ ಅನ್ಯಾಯ, ಅತ್ಯಾಚಾರಗಳು ನಡೆದರೂ ಅವುಗಳನ್ನು ಸಹಿಸಿಕೊಳ್ಳಬೇಕಾಗಿದೆ. ಇತ್ತೀಚೆಗೆ ಈ ಕಡೆಗೆ ನಮ್ಮ ಗಮನ ಸಾಗಲಿಲ್ಲ.

ಭಾರತದಲ್ಲಿ ಭವ್ಯವಾದ ಶಿಲಾ ಶಿಲ್ಪಕಲೆಗಳು ಇಂದಿಗೂ ಒಳ್ಳೇದಾಗಿ ಶೋಭಿಸುವಂತಹದ್ದು ಅನೇಕ ಇವೆ. ರಾಮೇಶ್ವರ ದೇವಾಲಯ—ಮಧುರೆ—ಶ್ರೀರಂಗ ಮುಂತಾದವುಗಳ ಶಿಲಾಮಯ ದೇವಾಲಯಗಳನ್ನು ನೋಡಿದರೆ ನಿಜವಾಗಿಯೂ ಇವು ಮನುಷ್ಯ ನಿರ್ಮಿತವಲ್ಲವೆಂದು ಅನ್ನಬೇಕಾಗುತ್ತದೆ. ಯಾಕೆಂದರೆ ಶಿಲೆಯ ಉಪಯೋಗ ನಮ್ಮಿಂದ ಇಂದು ದೂರಾಗಿ ಹೋಗಿದೆ. ಆದರೆ ಅದು ಒಂದು ಕಾಲದಲ್ಲಿ ಮನುಷ್ಯರಿಂದಲೇ ನಿರ್ಮಾಣ ಹೊಂದಿದೆ. ನಾವಿಂದು "ಸಿಮೆಂಟು" ಬಳಸಿದಂತೆ ಆಗಿನವರು ಶಿಲೆಯನ್ನು ಬಳಸಿಕೊಳ್ಳುತ್ತಿದ್ದರು.

ಕರ್ನಾಟಕದಲ್ಲಾದರೂ ಶಿಲ್ಪಕಲೆಯ ಉದ್ಯಮ ಕಡಿಮೆಯಾಗಲಿಲ್ಲ. ಹಳೇಬೀಡು—ಬಾದಾಮಿ—ಬೈಲೂರು—ಮುಂತಾದ ಶಿಲ್ಪಕಲೆ ಎಷ್ಟೋ ಕಾಲಗಳನ್ನು ಅತಿಕ್ರಮಿಸಿದರೂ ಇನ್ನೂ ಅವು ಚಂದವಾಗಿ ಶೋಭಿಸುತ್ತಲೇ ಇವೆ ಕರ್ನಾಟಕದ ರಾಜಧಾನಿಯಾಗಿದ್ದ ವಿಜಯನಗರದಲ್ಲೂ ಇವುಗಳ ಅಪೂರ್ವ ಸೃಷ್ಟಿಯನ್ನು ಕಾಣಬಹುದು. ಉತ್ತರ ಕನ್ನಡದ ಬನವಾಸಿ—ಸ್ವಾದಿ—ಯಾಜ—ಇಲ್ಲಿಯೂ ಕನ್ನಡ ರಾಜರು ಆಳಿದಂಥ ಸ್ಮಾರಕಗಳಿವೆ. ಯಾಜದಲ್ಲಿ ಒಂದೇ ಕಲ್ಲಿನಲ್ಲಿಯೇ ಕೊರೆದ ಕೆಲವು ಗುಡಿಗಳಿವೆಯಂತೆ. ಈ ಶಿಲಾ ಶಿಲ್ಪ ಕಲೆಯಲ್ಲಿ ಅಸಾಮಾನ್ಯ ಪಾಂಡಿತ್ಯಗಳಿಸಿದವ ಜಕ್ಕಣಾಚಾರಿ. ಕರ್ನಾಟಕದ

ಬಹಳಷ್ಟು ದೇವಾಲಯಗಳು ಇವನಿಂದಲೇ ನಿರ್ಮಿತವಾಗಿವೆ. ನಮ್ಮ ಹಿಂದಿನ ಇತಿಹಾಸ—ಸಾಂಸ್ಕೃತಿಕ ವೈಭವಗಳನ್ನು ಚಿರಂತನವಾಗಿ ತೋರಿಸಬಲ್ಲ ಕಲೆಗಳಲ್ಲಿ ಇವಕ್ಕೂ ಹೆಚ್ಚಿಗೆ ಮನ್ನಣೆ ಕೊಡಬೇಕು.

ಇವುಗಳ ನಿರ್ಮಾಣದ ಮಹಾ ಕೆಲಸ ನಮ್ಮಿಂದ ಸಾಧ್ಯವಾಗ ದಿದ್ದರೂ ಇರಲಿ! ಇವುಗಳನ್ನು ಅಬಾಧಿತವಾಗಿ ಸಂರಕ್ಷಿಸಿಕೊಂಡು ಅವುಗಳ ಪ್ರಯೋಜನವನ್ನು ಜನಾಂಗಕ್ಕೆ ತೋರಿಸಿಕೊಟ್ಟು ಸಂಶೋಧನೆ ನಡಿಸಿದ್ದರೆ ಮಹಾ ಕೆಲಸವಾದಂತಾಗುತ್ತಿತ್ತು. ಶಿಲಾಲಿಪಿಗಳು ನಮ್ಮಲ್ಲಿ ಬಹಳಷ್ಟು ಇವೆ. ಅವುಗಳ ಪರಿಶೋಧ ನಡೆದರೆ ನಮ್ಮ ಸಾಹಿತ್ಯ ಭಂಡಾರವೂ ಬೆಳೆಯುತ್ತಿತ್ತು. ನಮ್ಮ ಇತಿಹಾಸಕ್ಕೂ ಪುಷ್ಟಿ ಯಾಗುತ್ತಿತ್ತು.

ವೀರರ ಸ್ಮಾರಕವಾಗಿ—ಪಾತಿವ್ರತ್ಯದ ದ್ಯೋತಕವಾಗಿ ಇರುವ—ವೀರರಕಲ್ಲು—ಮಹಾಸತಿಯ ಕಲ್ಲು, ಇವುಗಳ ಮುಂದೆ ಇಂದೆಷ್ಟೋ ಕಡೆಗಳಲ್ಲಿ ರಕ್ತಬಲಿಯಂಥ ಹೀನ ಕೆಲಸಗಳೂ ನಡೆಯುಹತ್ತಿವೆ. ಆದ ರಿಂದ ಶಿಲ್ಪಕಲೆಗೆ ಸಂಶೋಧನೆ ಬಗ್ಗೆ ಮುಂದಾಳುಗಳ ಮಂಡಳಿ ಯೊಂದು ಸ್ಥಾಪನೆಯಾಗಿ ಇದರ ಅಭ್ಯುದಯದ ಬಗ್ಗೆ ಪ್ರಯತ್ನಿಸಿದ್ದರೆ, ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ನಡೆದು ಬಂದ ಇದೊಂದು ಸುಂದರವಾದ ಕಲೆಯು ರಕ್ಷಣೆಹೊಂದಿ ಇನ್ನೊಂದು ಕಾಲದಲ್ಲಾದರೂ ಬೆಳೆಯಲು ಅವಕಾಶವಾಗುತ್ತಿತ್ತು.

## ೮ ಯಕ್ಷಗಾನ

ಯಕ್ಷಗಾನ ಕಲಾಸಾಹಿತ್ಯ— ಸುಂದರವಾದ ಕಲೆಯೆನಿಸಿ—ಪ್ರಾಮುಖ್ಯವಾಗಿ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲೇ ವಿಶಿಷ್ಟವಾದ ಸ್ಥಾನಮಾನಗಳಿಂದ ಮಹತ್ವದ್ದೆನಿಸಿದೆ. ಬಹುಕಾಲದಿಂದ ಕನ್ನಡಿಗರ ಜೀವನದಲ್ಲಿ ಮನೆಮಾಡಿಕೊಂಡು ಜನಸೇವೆಯಲ್ಲಿ ಮುಂದುವರಿಯು ತ್ತಲೇ ಬಂದಿದೆ. ತನ್ನ ವಿಶಾಲವಾದ ಧ್ಯೇಯಧೋರಣೆಗಳಿಂದ ಉಪಾ ಸಕರ ಜೀವನದಲ್ಲಿ ನಿತಾಂತವೂ ಸಂತಸವನ್ನುಂಟುಮಾಡುತ್ತಲಿದೆ.

ಪುರಾತನಕಾಲದ ಸಂಸ್ಕೃತಿ ಸಭ್ಯತೆಗಳನ್ನು, ತತ್ವ ವಿಚಾರಗಳನ್ನು ಹೃದಯಂಗಮವಾಗಿ ಬೋಧಿಸುವದೇ ಇದರ ವೈಶಿಷ್ಟ್ಯ. ಕಥನ ಶೈಲಿ

ಇದರ ಜೀವಾಳ. ಭಿನ್ನ ಭಿನ್ನ ರಾಗ-ಧಾಟಿಗಳಲ್ಲಿ ಮನರಂಜನೆಯಾಗು ವಂತೆ ಹಾಡಿಕೊಳ್ಳುವ ರೀತಿ ಇದರಲ್ಲಿದೆ. ಸಾವಿರಾರು ವರ್ಷಗಳ ಹಿಂದಿನ ಜೀವನ ಚಿತ್ರಗಳನ್ನು ಜೀವಂತವಾಗಿ ನಮ್ಮ ಕಣ್ಮುಂದೆ ತಂದಿರಿಸುವಲ್ಲಿ ಇದೂ ಅಗ್ರಸ್ಥಾನ ವಹಿಸಿಕೊಂಡಿದೆ.

ಈ ಯಕ್ಷಗಾನ ಕಲೆಯ ನಿರ್ಮಾಣದ ಆವಶ್ಯಕತೆ—ನಿರ್ಮಾಣದ ಕಾಲ—ಇವುಗಳನ್ನು ನಿರ್ಣಯಿಸಲು ನಮಗೆ ಸಾಕಷ್ಟು ಆಧಾರಗಳು ದೊರಕಿಲ್ಲ. ಗೋದಾವರಿಯ ತೀರದಲ್ಲಿ ಇದಕ್ಕೆ ಸಂಬಂಧಪಟ್ಟ ಹಲ ಕೆಲವು ಶಿಲಾ ಚಿತ್ರಗಳು ದೊರಕಿವೆಯಂತೆ. ರಾವಣನ ಕಾಲದಲ್ಲಿ ಅವನ ಉಪದ್ರವದಿಂದ ಬಳಲಿದ ಯಕ್ಷರು ತಮ್ಮ ಸಂಸ್ಕೃತಿಯ ರಕ್ಷಣೆಗಾಗಿ ಉಪಯೋಗಿಸಿದ ಈ ವಿಧಾನವನ್ನು ನಮ್ಮಲ್ಲಿಯೂ ಸುಲಭವಾಗಿ ಧರ್ಮ-ನೀತಿ ಮುಂತಾದ ಮಾನವ್ಯದ ಗುಣಗಳು ಜನ ಸಾಮಾನ್ಯರಲ್ಲೂ ಪ್ರತಿ ಬಿಂಬಿಸುವದಕ್ಕಾಗಿ ಬಳಕೆಗೆ ತಂದರೆಂದು ಒಬ್ಬರು ಬರೆದಿದ್ದಾರೆ. ಆದರೆ ಇಷ್ಟು ಮಾತ್ರ ಊಹಿಸಬಹುದು; ಪುರಾತನ ಚಾರಿತ್ರಿಕ ವಿಚಾರವು ಪೂರ್ಣವಾಗಿ ಸಂಸ್ಕೃತದಲ್ಲಿದ್ದು ಅದು ಜನಸಾಮಾನ್ಯರಿಗೂ ತಿಳಿಯಲು ಅಸಾಧ್ಯವಾದ್ದರಿಂದ ಅದನ್ನು ಕನ್ನಡಕ್ಕಿಳಿಸಿ ಎಲ್ಲರಿಗೂ ಸುಲಭವಾಗಿ ತಿಳಿಸುವ ಉದ್ದೇಶದಿಂದ ಇದನ್ನು ನಿರ್ಮಿಸಿ ಬಳಕೆಗೆ ತರಲಾಯಿತೆಂದು ಇತ್ತೀಚೆಗಿನ ಅನುವಾದ ಪದ್ಧತಿಯಿಂದ ಊಹಿಸಿಕೊಳ್ಳಬಹುದು.

ಯುಗ ಪ್ರವರ್ತಕರಾದ ರಾಮಕೃಷ್ಣಾದಿಗಳ ಮಹಾತ್ಮರ ಚರಿತ್ರೆಯು ಆ ಕಾಲದ ಸನ್ನಿವೇಶದೊಂದಿಗೆ ಅಂಥ ಚಾರಿತ್ರಿಕ ಪುರುಷ ರಾಗಿಯೇ ತೋರಿಸುವಂಥ ಹೊಸ ರೀತಿಯ ರಚನೆಯು—ರಮ್ಯತೆಯು—ಕ್ರಮವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಆ ಕಾಲ—ಸ್ವರೂಪ ಘಟನೆ ಗಳನ್ನು ಸಜೀವವಾಗಿ ಕಣ್ಮುಂದೆ ತೋರಿಸುವ ಸಾಹಸವನ್ನಿಲ್ಲಿ ಕಾಣ ಬಹುದು. ಇದರಿಂದ ಎಂಥ ಅಶಿಕ್ಷಿತರಿಗೂ ಸಹಾ ಅಂಥ ಮಹಾತ್ಮರ ದಿವ್ಯ ಚರಿತ್ರೆಗಳನ್ನು ತಿಳಿದುಕೊಳ್ಳಲು ಅನುಕೂಲ ಅವಕಾಶಗಳು ದೊರಕವವು.

ಈ ಕಲೆಯು ಇಷ್ಟು ಉತ್ತಮವಾಗಿದ್ದರೂ ಇದರ ಸುಂದರವಾದ ಬೆಳವಣಿಗೆಗಾಗಿ ಸಾಕಷ್ಟು ವಿಮರ್ಶೆ-ಸುಧಾರಣೆಗಳು ಇನ್ನೂ ನಡೆಯ

ದಿದ್ದುದು ವಿಷಾದಕರ. ಜನಾಂಗದಲ್ಲಿ ಬೇಕಾದ ವಿಚಾರಗಳ ಪ್ರಚಾರಣೆಯ ಕೆಲಸದಲ್ಲಿ ಇದು ಭಾರೀ ಸಹಾಯಮಾಡಬಲ್ಲುದು. ಆದರೆ ಪೌರಾಣಿಕದ ಹೊರತಾಗಿ ಸಾಮಾಜಿಕ ವಿಚಾರಗಳನ್ನು ಇದರಲ್ಲಿ ಚಿತ್ರಿಸುವ ಸಾಹಸ ನಡೆದಿದ್ದಿಲ್ಲ. ಉಡುಪಿಯ ಎಂ. ವಿ. ಹೆಗಡೆಯವರು "ಸ್ವರಾಜ್ಯ ವಿಜಯ" ಎಂಬ ಮೊನ್ನೆಮೊನ್ನೆಯ ಸ್ವಾತಂತ್ರ್ಯಾಂದೋಲನದ ವಿಚಾರಗಳನ್ನೆಲ್ಲಾ ಕಲೆಹಾಕಿ ಸುಂದರವಾಗಿ ರಚಿಸಿ ಸಾಮಾಜಿಕ ವಿಷಯಗಳನ್ನು ಯಕ್ಷಗಾನದಲ್ಲಿ ಸೇರಿಸಬಹುದೆಂದು ಆದರ್ಶವಾಗಿ ತೋರಿಸಿಕೊಟ್ಟಿದ್ದಾರೆ. ಮೊಟ್ಟಮೊದಲು ಸಾಮಾನ್ಯರಿಗೆ ಸಾಮಾಜಿಕ ವಿಷಯಗಳು ರುಚಿಸದಿರಬಹುದು. ಇದರಿಂದಲೇ— ಸಿರಿಸಿಯಲ್ಲಿ ಈ ಸಾರೆ ಸೇರಿದ ಯಕ್ಷಗಾನ ಪರಿಷತ್ತಿನಲ್ಲಿ ಒಬ್ಬರು ಸಾಮಾಜಿಕಕ್ಕೂ ಯಕ್ಷಗಾನದಲ್ಲಿ ಅವಕಾಶಕೊಟ್ಟು ಯಕ್ಷಗಾನ ಕಲಾರಂಗವನ್ನು ವಿಸ್ತರಿಸಬೇಕೆಂದು ಕೇಳಿಕೊಂಡಾಗ—ಇನ್ನೊಬ್ಬರು — ಯಕ್ಷಗಾನಕ್ಕೆ ನೃತ್ಯವೇ ಪ್ರಧಾನವಾದ್ದರಿಂದ – ಸಾಮಾಜಿಕದಲ್ಲಿ ನೃತ್ಯವನ್ನು ಸ್ವೀಕರಿಸಲು ಬರುವದಿಲ್ಲವಾದ್ದರಿಂದ ಸಾಮಾಜಿಕದಿಂದ ಯಕ್ಷಗಾನಕ್ಕೆ ವಿರಸವಾಗುವದೆಂದು ವಿರೋಧಿಸಿದರು. ಆದರೆ ನೃತ್ಯವು ಯಕ್ಷಗಾನ ನಾಟಕಕ್ಕೆ ಅಗತ್ಯವೇ ಹೊರತು ಯಕ್ಷಗಾನಕೂಟಗಳಿಗೆ ಅವಶ್ಯವಿರುವದಿಲ್ಲ. ಇನ್ನು ಸಾಮಾಜಿಕದಲ್ಲಿ ನೃತ್ಯ ಪ್ರಯೋಗಿಸಿದರೂ ವಿರಸವಾಗುವದಿಲ್ಲ. ಇದು ನಮಗೆ ಮೊದಲಾದ್ದರಿಂದ ಅಂಥ ಸಂದೇಹಗಳು ಉಂಟಾಗುವದು ಸಹಜ. ಗಾಂಧೀ ನೆಹರು ಇವರೆಲ್ಲ ಕುಣಿಯುವರೇ? ಎಂದೊಮ್ಮೆ ಕೇಳಿದರೆ--ಹಿಂದಿನ ಕಾಲದ ಕೃಷ್ಣರಾಮಾದಿಗಳು ಕುಣಿದಿದ್ದರೇ? ಎಂದು ಉತ್ತರಿಸಬೇಕಾಗುವದು. ಸಂಗೀತ ನಾಟಕದಲ್ಲಿ ಸಾಮಾಜಿಕ ವಿಷಯಗಳಿಂದ ನಮಗೆ ಯಾವ ಪ್ರಶ್ನೆಯೂ ಉಂಟಾಗುವದಿಲ್ಲ. ಯಾಕಂದರೆ ಸಂಗೀತದಲ್ಲಿ ಸಾಮಾಜಿಕ ಹೊಸತಲ್ಲ. ಎಂದಿನಿಂದಲೋ ಬಳಕೆಯಲ್ಲಿ ಬಂದಿದೆ. ಇದರಿಂದ ಪ್ರತಿಭಾವಂತರು ಮುಂದಾಳುಗಳು ಪ್ರಯತ್ನಿಸಬೇಕಾದದ್ದು ಅಗತ್ಯ. ಆಯಾ ಪಾತ್ರಗಳಿಗೆ ಅನುಬದ್ಧವಾಗಿ ಪಾತ್ರಗಳ ವೈಶಿಷ್ಟ್ಯಕ್ಕೆ ವಿರೋಧ ಬಾರದಂತೆ ಚಿತ್ರಿಸಿಕೊಂಡು ಕಲಾರಂಗವನ್ನು ವಿಸ್ತರಿಸುವದರಲ್ಲಿ ಕಲಾ ಸಾಹಿತ್ಯಕ್ಕೆ ಭೂಷಣವೇ ಹೊರತು ಬಾಧಕವಲ್ಲ.

ಇಂದು ಅನ್ನದ ಸಮಸ್ಯೆ— ದೀನದಲಿತರ ಸಮಸ್ಯೆ— ಕೋಮು ವಾರು ಮುಂತಾದ ಸಮಸ್ಯೆಗಳೆಷ್ಟೋ ಭೂಲಾಕಾರವಾಗಿ ಬೆಳೆದು ತಾಂಡವವಾಡುತ್ತಿರುವಾಗ ಇಂಥ ಸಮಸ್ಯೆಗಳನ್ನು ಹೃದಯದ್ರಾವಕವಾಗಿ ಚಿತ್ರಿಸಿ ಜನತೆಯ ಮುಂದಿಟ್ಟರೆ ಎಷ್ಟೋ ಸಮಸ್ಯೆಗಳು ಬಗೆಹರಿಯ ಬಹುದು. ಅನ್ನದ ಅಭಾವದಿಂದ ಅರೆಹೊಟ್ಟೆ ಉಂಡು ದಾರಿದ್ರ್ಯ ದೌರ್ಬಲ್ಯಗಳಿಂದ ನರಳುತ್ತಿರುವ ಜನಾಂಗದ ಚಿತ್ರವನ್ನು ಯಕ್ಷಗಾನ ದಲ್ಲೂ ರೂಪುಗೊಳಿಸಿದ್ದರೆ ಇದೂ ಒಂದು ಜನಜಾಗ್ರತಿಯ ಉತ್ತಮ ಸಾಧನವೆಂದು ನಿರ್ವಿವಾದವಾಗಿ ಖಚಿತವಾಗುತ್ತಿತ್ತು.

ಇದರಲ್ಲಿ ಅಶಿಕ್ಷಿತರಿಗೂ ಪ್ರವೇಶಿಸುವ ಅವಕಾಶ ದೊರಕಿದ್ದರಿಂದ ಕೆಲವು ಕಾಲ ಇದರ ಬೆಳವಣಿಗೆಯಾಗದೇ — ಜುಗುಪ್ಸೆ ಹುಟ್ಟುವಷ್ಟು ಅಪಾರ್ಥಕ್ಕೂ ಇಳಿದಿತ್ತು. ಆದರೆ ಇತ್ತೀಚೆಗೆ ಅಲ್ಲಲ್ಲಿಯ ಪ್ರಮುಖ ಯಕ್ಷಗಾನ ನಾಟಕ ಸಾಹಸದ ಪರಿಣಾಮವಾಗಿ ಪುನರ್ಜೀವ ಬಂದಂ ತಾಗಿದೆ. ಜನತೆಯ ಮನಸ್ಸನ್ನೂ ಆಕರ್ಷಿಸುತ್ತಿದೆ.

ಇದನ್ನು ಸುಸಂಬದ್ಧವಾಗಿ ಸಜೀವವಾಗಿ ಬೆಳೆಸುವುದಕ್ಕೆ ಅಖಿಲ ಕರ್ನಾಟಕಕ್ಕೂ ವ್ಯಾಪಕತೆಯುಳ್ಳ ಸಂಸ್ಥೆಯೊಂದು ನಿರ್ಮಾಣವಾಗಿ ಕಾರ್ಯಪ್ರವೃತ್ತವಾಗುವದಿಂದು ಅಗತ್ಯ. ಜನತೆಗೆ ಸುಲಭವಾಗಿ ಆನಂದ ವನ್ನುಂಟುಮಾಡಿ ನೈತಿಕ ಶಕ್ತಿಯನ್ನು ಬೆಳೆಸಲು ಇದು ಸರ್ವೋತ್ಕೃಷ್ಟ ಕಲೆಯಾಗಿದೆ. ಮಲೆನಾಡ ಹಳ್ಳಿಯಲ್ಲಿ ನಿತ್ಯವೂ ಹಗಲಿನ ಕೆಲಸ ತೀರಿಸಿ ಸಾಯಂಕಾಲವಾದೊಡನೆ ಮನೆಯವರೆಲ್ಲರೂ ಸೇರಿ ಇದನ್ನು ಹಾಡಿ ನಲಿದಾಡಿ ತಮ್ಮ ಶ್ರಮವನ್ನು ನೀಗಿಸಿಕೊಂಡು ವಿಹರಿಸುವ ಪರಿಪಾಠ ವನ್ನು ಪ್ರತಿ ಮನೆಯಲ್ಲೂ ಕಾಣಬಹುದು. ವಿಶೇಷ ಸಮಾರಂಭ ದಲ್ಲಂತೂ ಇದಿಲ್ಲದಿದ್ದರೆ ಕಳೆಯೇ ಇರಲಾರದು ಅವರಿಗೆ.

ಅದರಿಂದ ಜನಮನವನ್ನು ತೃಪ್ತಿಪಡಿಸುವ ರೀತಿಯಲ್ಲಿ ಹೊಸ ಹೊಸ ಆವಿಷ್ಕಾರಗಳಿಂದ ಮುಂದರಿಸಿದರೆ ಸುಸಂಸ್ಕೃತಿಯಿಂದ ಬೆಳಗಿದರೆ ಇದರಿಂದ ಜೀವನದಲ್ಲಿ ಭಾರಿ ಪ್ರಯೋಜನವಿದೆ.

## (೯) ನೃತ್ಯ ಕಲೆ

ಕರ್ನಾಟಕದಲ್ಲಿ ನೃತ್ಯ ಕಲೆ ಪ್ರತ್ಯೇಕವಾದ ಸ್ಥಾನವನ್ನು ಸಾಕಷ್ಟು

ಗಳಿಸಿಕೊಂಡಿಲ್ಲ. ಯಕ್ಷಗಾನಕ್ಕೆ ಹೊಂದಿಕೆಯಾಗಿಯೇ ಬಳಸುವ ರೂಢಿ ಬಹಳಷ್ಟಿದೆ. ಪ್ರತ್ಯೇಕ ನೃತ್ಯವನ್ನು ಕಾಣುವದು ತೀರ ಅಪರೂಪ. ಇದರಿಂದ ಮೊನ್ನೆ ಮೊನ್ನೆ ಬಂದ ಕುಲಕರ್ಣಿ ಶ್ರೀನಿವಾಸರ ನೃತ್ಯ ಪ್ರಯೋಗವು ಬಹಳಷ್ಟು ಜನರಿಗೆ ರುಚಿಸಲೇ ಇಲ್ಲ. ಆದರೂ ಶ್ರೀಯುತರು ಇತ್ತೀಚೆಗೆ ಧಾರವಾಡ ಹುಬ್ಬಳ್ಳಿಗಳಲ್ಲಿ "ನೃತ್ಯ ಭಾರತಿ" ಸಂಸ್ಥೆಯಿಂದ ನೃತ್ಯ ಕಲೆಯ ಬಗ್ಗೆ ಹೊಸದೊಂದು ಜಾಗ್ರತಿಯನ್ನೇ ಹುಟ್ಟಿಸಿದ್ದಾರೆ. ಭಾರತದ ನೃತ್ಯ ಕಲೆಯ ಗೌರವವನ್ನು ವಿದೇಶಗಳಲ್ಲೂ ತೋರಿಸಿ ಬಂದಿದ್ದಾರೆ.

ಭರತ ಮುನಿಯು ನೃತ್ಯ ಕಲೆಯನ್ನು ಉಜ್ಜೀವನಗೊಳಿಸಿ ಬೆಳಕಿಗೆ ತಂದವ ಅದರಿಂದ ಭರತ ನಾಟ್ಯವೆಂದು ಪ್ರಖ್ಯಾತಿಯೂ ಇದೆ. ಭಾವ – ರಾಗ—ತಾಳಗಳ ಸಮನ್ವಯದಿಂದ ಕೂಡಿದ್ದರಿಂದ ಇದನ್ನು ಭರತ ನಾಟ್ಯವೆಂದು ಹೇಳುವರೆಂದು ಇನ್ನೆಷ್ಟೋ ಜನ ಹೇಳುವದೂ ಉಂಟು. ಆದರೂ ಭರತ ಮುನಿಯು ರಚಿಸಿದ ನಾಟ್ಯ ಶಾಸ್ತ್ರದಿಂದ ಈ ನೃತ್ಯ ಕಲೆಯ ಅಸಾಮಾನ್ಯ ಪಾಂಡಿತ್ಯ ಭರತ ಮುನಿಯಲ್ಲಿತ್ತೆಂದು ಊಹಿಸಬಹುದು. ಕಾಲಿದಾಸನು ವಿಕ್ರಮೋರ್ವಶೀಯದಲ್ಲಿ—ಮುನಿನಾ ಭರತೇನಯಃ ಪ್ರಯೋಗೋ ಭವತೀಷು ಅಷ್ಟ ರಸಾಶ್ರಯೋ ನಿಯುಕ್ತಃ| ಲಲಿತಾಭಿನಯಂತಮಶ್ಯ ಭರ್ತಾಮರು ಕಾಂದ್ರಷ್ಟುಮನಾಃ ಸಲೋಕಪಾಲಃ|| ಎಂದು ಭರತನ ಹೃದಯ ಭಾವನೆಗಳನ್ನು ಅರಿತು ಹೇಳಿದ್ದಾನೆ.

ಕೇವಲ ಅಂಗಚಲನ—ಭಾವಗಳಿಂದಲೇ ವಿಷಯದ ಸ್ಪಷ್ಟಾರ್ಥವನ್ನು ತಿಳಿಸುವ ಅದ್ಭುತ ಸಾಮರ್ಥ್ಯ ಈ ನೃತ್ಯ ಕಲೆಗಿದೆ. ಪ್ರೇಕ್ಷಕರ ಹೃದಯದಲ್ಲಿ-- ಶೃಂಗಾರ ಕರುಣ—ಅದ್ಭುತ – ಭೀಭತ್ಸ ಮುಂತಾದ ರಸೋದ್ರೇಕವನ್ನು ಮಾಡುವದು. ಇದಕ್ಕೆ ಭರತ ಮುನಿಯ ನಾಟ್ಯ ಶಾಸ್ತ್ರದ ಒಂದೆರಡು ಮಾತು ಇಲ್ಲಿ ಉದಾಹರಿಸಬಹುದು. ಭಾವಗಳನ್ನೂ ಅಭಿಪ್ರಾಯಗಳನ್ನೂ ಇತರರಿಗೆ ಸೂಚಿಸುವದಕ್ಕಾಗಿ ಮಾಡುವ ಚಿತ್ತಾಕರ್ಷಕ ಅಂಗ ಚಲನೆಯೇ ಅಭಿನಯ. ನರ್ತಕಿಯು—ಲಜ್ಜೆ—ನಮಸ್ಕಾರ—ದುಃಖಗಳನ್ನು ತೋರಿಸಬೇಕಾದರೆ ಅಧೋಮುಖ ಅಂದರೆ ತಗ್ಗಿದ ಶಿರಸ್ಸು ಎಂಬ ಶಿರಸ್ಸಿನ ಅಭಿನಯದಿಂದ ಈ ಭಾವಗಳನ್ನೆಲ್ಲಾ

ವ್ಯಕ್ತಪಡಿಸಬಹುದೆಂದು ತನ್ನ ನಾಟ್ಯ ಶಾಸ್ತ್ರದಲ್ಲಿ (ಅಧೋಮುಖಂ ಸ್ಥಿತು ಜಾಪಿ – ಶಿರಃಪ್ರಾಹುರಧೋಮುಖಂ | ಲಜ್ಜಾಯಂಚ ಪ್ರಣಾಮೆ | ದುಃಖೆಬಾಧೋಗತಂ ಭವೇತ್) ಎಂದು ಹೇಳಿದ್ದಾನೆ.

ಇದೇ ತತ್ವವನ್ನೇ ಇನ್ನೂ ವಿಶದಪಡಿಸುವಾಗ ವಿಭಾವ– ಅನುಭಾವ–ವ್ಯಭಿಚಾರಿ ಭಾವಗಳು ಸಂಯೋಗವಾದರೆ ರಸ ನಿಷ್ಪತ್ತಿಯಾಗುತ್ತದೆಂದು ಭರತನು ಹೇಳಿದ್ದಾನೆ. ಶಕುಂತಳೆಗೆ ದುಷ್ಯಂತನ ಆಲಂಬನ ವಿಭಾವ --ನಟನು ಆಹಾರ್ಯಾಭಿನಯದಿಂದ ದುಷ್ಯಂತನ ಮೂರ್ತಿಯನ್ನೇ ಪ್ರೇಕ್ಷಕರ ಮುಂದೆ ತರಬಲ್ಲ. ಯಾವ ಪಾತ್ರವನ್ನು ಅಭಿನಯಿಸಬೇಕೋ, ಅದಕ್ಕೆ ತಕ್ಕುದಾದ ವೇಷ ಭೂಷಣಗಳನ್ನು ಧರಿಸುವದೇ ಆಹಾರ್ಯಾಭಿನಯದ ವಸ್ತು. ಅಭಿನಯದ ಮೂಲಕ ಉದ್ದೀಪನ ವಿಭಾವವನ್ನೂ ಸೃಷ್ಟಿಸಬಹುದು. ಹೇಗೆಂದರೆ ತುಂಬಿದ ಪ್ರೇಮವುಳ್ಳ ನಾಯಿಕೆಗೆ ಸಣ್ಣಸಣ್ಣ ಗಿಡಗಳಿಂದ ತುಂಬಿದ ವನಪ್ರವೇಶ ಉದ್ದೀಪವನ ವಿಭಾವ, ಇದನ್ನು ತೋರಿಸಬೇಕಾದರೆ ನರ್ತಕಿ ಅರ್ಧಚಂದ್ರ ಹಸ್ತವನ್ನು ಅಭಿನಯಿಸಬೇಕು. ಆಗ ವನ ಸೂಚಿತವಾಗುತ್ತದೆ........ಪ್ರೇಮ ತುಂಬಿದ ಶಕುಂತಳೆ ದುಃಷ್ಯಂತನನ್ನು ರಸ ದೃಷ್ಟಿಯಿಂದ ನೋಡುವಾಗ "ಕಾಂತಾದೃಷ್ಟಿ"ಯನ್ನು ಅಭಿನಯಿಸಬೇಕು. ಹರ್ಷವನ್ನು ಪ್ರೇಕ್ಷಕನಲ್ಲಿ ಉಂಟುಮಾಡಲು "ಚಕ್ರಭ್ರಮರೀ" "ತ್ರಿಪತಾಕ" ನೃತ್ಯವನ್ನು ಪ್ರಯೋಗಿಸಲು ನಿಶ್ಚಯವಾಗಿ ಹರ್ಷವುಂಟಾಗುವದೆಂದು ಹೇಳಿದ್ದಾನೆ. ಹೀಗೆ ಪ್ರತಿಯೊಂದು ವಿಷಯದ ಬೋಧನೆಗೂ ನೃತ್ಯದಲ್ಲಿ ಅವಕಾಶವಿದೆ.

ಇದರ ಸರಿಯಾದ ತಿಳುವಳಿಕೆ ನಮ್ಮಲ್ಲಿ ಆಗಿದ್ದರೆ ಇದರ ಪ್ರಧಾನ ಜೀವವೆನಿಸಿದ ಅಂಗಭಾವಗಳಿಂದ ಮೂಕ ಜನಾಂಗದ ಜೀವನದಲ್ಲಿ ಜಾಗ್ರತಿಯನ್ನು ಹುಟ್ಟಿಸಲು ಒಳ್ಳೇ ಸಹಕಾರಿ ಸಾಧನವೆನಿಸುತ್ತಿತ್ತು. ಈಗಲಾದರೂ ಅದರ ಸಹಾಯದಿಂದಲೇ ಅದು ಬದುಕಿಕೊಂಡಿದೆ ಮೂಕ ಜೀವನಕ್ಕೆ ಹಾದಿ ತೋರಿಸಲು ಇದೊಂದು ಬೆಳಕು.

ಕಥಾ ಪಾತ್ರಕ್ಕೆ ಹೊಂದಿಕೆಯಾದ ವೇಷ–ಭೂಷಣಗಳಿಂದ ಭಾವ-ರಾಗಗಳಿಂದ, ತಾಳ--ತಂತಿಗಳಿಂದ ಅಭಿನಯಿಸಿದರೆ ನಿಜವಾಗಿಯೂ

ಇದು ಎಂಥವನನ್ನಾದರೂ ಮುಗ್ಧಗೊಳಿಸಬಲ್ಲದು. ಈಶ್ವರನ ತಾಂಡವ ನೃತ್ಯ ಶಾಸ್ತ್ರಗಳಲ್ಲಿ ವರ್ಣನೆಯಿದೆ. ಭಾರತದ ಈ ಭರತನಾಟ್ಯ ದಿಂದಲೇ—ಕಥಕ್ಕಳಿ—ಮಣಿಪುರಿ, ಮುಂತಾದ ನೃತ್ಯಗಳನ್ನು ಸುಸಂಬದ್ಧವಾಗಿ ಬಳಸಿಕೊಂಡು ಚಲನಚಿತ್ರದಲ್ಲಿ ಹೆಚ್ಚಿನ ಆಕರ್ಷಕತೆ—ಪ್ರಯೋಜನವನ್ನು ತಂದುಕೊಂಡರು ಇದರಿಂದಲೇ ಈ ಕಲೆಯು ವಿದೇಶಗಳಲ್ಲೂ ಪ್ರಚಾರವಾಯಿತು.

ಇದು ಇನ್ನೂ ವಿಶಾಲವಾಗಿ ನಮಲ್ಲಿ ಬೆಳೆಯಲಿ! ಸೌಭಾಗ್ಯ ಕಾಲ ಒದಗಲಿ!

## ೧೦ ನಾಟಕ

ಸಾಹಿತ್ಯ—ಕಲೆಗಳಲ್ಲೆಲ್ಲಾ ನಾಟಕದ ಸ್ಥಾನ ಹಿರಿದು. ನಾಟಕಕ್ಕಿರುವ ಪ್ರೌಢಿಮೆ—ರಮ್ಯತೆಗಳು ಯಾವುದಕ್ಕೂ ಇಲ್ಲ. ಇದರಿಂದಲೇ ಹಿಂದಿನ ಕಾಲದ ಭಾಸ ಕಾಲಿದಾಸಾದಿಗಳು ನಾಟಕಕಾರರಾದರು. 'ಶಾಕುಂತಲ' 'ಮೃಚ್ಛಕಟಿಕ' ಮುಂತಾದ ಸರ್ವೋತ್ತಮ ನಾಟಕಗಳು ಸೃಷ್ಟಿಯಾಗಿ ಅಮರವಾಗಿ ಉಳಿದವು.

ಎಲ್ಲ ಕಲೆಗಳ ಸಾರಸಂಮಿಶ್ರಣದ ಮಧುರ ರಸಪಾಕ ನಾಟಕ. ಇದರಲ್ಲಿ ಸಾಹಿತ್ಯವಿದೆ. ಸಂಗೀತ ನೃತ್ಯ ಮುಂತಾದ ಲಲಿತ ಕಲೆಗಳೆಲ್ಲಾ ಸಜೀವವಾಗಿ ರೂಪುಗೊಳ್ಳುತ್ತವೆ. ಇದರಿಂದ ನಾಟಕಕ್ಕೆ ಹೊಸದೊಂದು ಪ್ರಪಂಚವನ್ನೇ ನಿರ್ಮಿಸುವ ಶಕ್ತಿ ಇದೆ. ಸ್ಥಾನವಿದೆ.

ನಾಟಕವನ್ನು ಸಾಹಿತ್ಯದ ಪೂರ್ಣತೆಯ ದ್ಯೋತಕವಾಗಿ ತಿಳಿಯುವ ಸಂಪ್ರದಾಯ ನಮ್ಮಲ್ಲಿದೆ. ಸಾಹಿತ್ಯಸೀಮೆಯನ್ನು ನಾಟಕಾಂತವಾಗಿ ತಿಳಿಯುತ್ತಾರೆ. ಈ ವಿಷಯವನ್ನು ಹೇಳುವಾಗ ಕವಿಯೊಬ್ಬನು "ಕಾವ್ಯೇಷು ನಾಟಕಂ ರಮ್ಯಂ" ಎಂದಿದ್ದಾನೆ. ಮೊದಲಿಗೆ ಕಾವ್ಯಗಳಲ್ಲಿ ಆವನಿಗೆ ನಾಟಕವೇ ರಮ್ಯವಾಗಿ ಕಂಡಿತು. ನಂತರ "ತತ್ರಾಪಿಚ ಶಕುಂತಲಾ" ಶಾಕುಂತಲಾ ನಾಟಕವೇ ಹೆಚ್ಚಿನದಾಯಿತು. ಇಷ್ಟಕ್ಕೆ ಅವನ ಪ್ರವೃತ್ತಿ ನಿಲ್ಲಲಿಲ್ಲ. "ತತ್ರಾಪಿಚ ಚತುರ್ಥೋಂಕ—ತತ್ರ ಶ್ಲೋಕ ಚತುಷ್ಟಯಃ" ಶಾಕುಂತಲಾದಲ್ಲಿಯೂ ನಾಲ್ಕನೇ ಅಂಕ, ಅದ

ರಲ್ಲೂ ನಾಲ್ಕನೇ ಶ್ಲೋಕ—ಹೆಚ್ಚು ರುಚಿಯೆನಿಸಿತು. ಹೀಗೆ ಕಾಲಿದಾಸನ ನಾಟಕಸೇವೆಯ ಪ್ರತಿಭೆಯನ್ನು ಹೇಳಿದುದರ ಜೊತೆಗೆ ನಾಟಕವು ಮಾನವನ ಮನಸ್ಸನ್ನು ಮುನ್ನಡಿಸಿ ವಿಕಾಸಗೊಳಿಸಿದುದೂ ಧ್ವನಿತವಾಗುತ್ತದೆ. ನಾಟಕ ಬುದ್ಧಿಯನ್ನು ಇಷ್ಟು ಪಕ್ವಗೊಳಿಸುತ್ತದೆ.

ನಾಟಕದಲ್ಲಿ ಎರಡು ವಿಧವಾಗಿ ನಾವು ಕಾಣಬಹುದು. ಪೌರಾಣಿಕ, ಸಾಮಾಜಿಕ, ಐತಿಹಾಸಿಕ ನಾಟಕಗಳೂ ಕೆಲವು ಇವೆ. ಆದರೆ ಮೊಟ್ಟಮೊದಲಿಗೆ ಪೌರಾಣಿಕ ನಾಟಕಗಳೇ ಹೆಚ್ಚು ಬೆಳದವು. ಕನ್ನಡದಲ್ಲಿ ಅನುವಾದಿತವಾಗಿದ್ದರೂ ಬಸವಪ್ಪ ಶಾಸ್ತ್ರಿಗಳ "ಶಾಕುಂತಲಾ" ನಾಟಕ— ನಾಟಕ ಕಲೆಯನ್ನು ಬೆಳೆಯಿಸಲು ಮಾರ್ಗತೋರಿಸಿತು. ಹಾಗೆಯೇ ಪೌರಾಣಿಕ ನಾಟಕಗಳು ಒಂದೊಂದಾಗಿ ಸೃಷ್ಟಿಯಾಗತೊಡಗಿತು. ಆದರೆ ಇತ್ತೀಚೆಗೆ ಸಾಮಾಜಿಕ ನಾಟಕಗಳು ಹುಲುಸಾಗಿ ಬೆಳೆಯತೊಡಗಿವೆ. ಕೈಲಾಸಂ ಸಾಮಾಜಿಕ ನಾಟಕದ ಕ್ರಾಂತಿಕಾರ. ಗ್ರೀಕ ಮತ್ತು ಇಂಗ್ಲಿಷ್ ಸಾಹಿತ್ಯಗಳ ಬಳಕೆಯಿಂದ ನಮ್ಮ ಸಾಮಾಜಿಕ ನಾಟಕಗಳು ಹೆಚ್ಚೆಚ್ಚು ಆಕರ್ಷಕವಾಗುವಂತೆ ಹೊಸ ಹೊಸ ಆವಿಷ್ಕಾರಗಳಿಂದ ರೂಪುಗೊಳ್ಳಹತ್ತಿತು. ಇದರಿಂದ ಪೌರಾಣಿಕ ನಾಟಕಗಳಿಗೆ ಮೊದಲಲ್ಲಿಗಿದ್ದ ಮೇಲ್ಮೆ ಇತ್ತೀಚೆಗೆ ಕಡಿಮೆಯಾಗಹತ್ತಿದೆ. ಆದರೂ ಜನಸಾಮಾನ್ಯರಿಗೆ ಸಾಮಾಜಿಕಗಳು ಪ್ರೀತಿಯೆನಿಸುವ ಕಾಲವಿನ್ನೂ ಬಂದಿಲ್ಲ. ಕೈಲಾಸಂರವರ "ಬಂಡ್ವಾಳಿಲ್ಲದ ಬಡಾಯಿ"— "ಟೊಳ್ಳುಗಟ್ಟಿ" ಸಾಮಾನ್ಯ ಜನರ ಬೇಸರವನ್ನೂ ನಿವಾರಿಸಲಾರವು. ಯಾಕಂದರೆ ಅದನ್ನು ತಿಳಿದುಕೊಳ್ಳುವಷ್ಟು ಚೈತನ್ಯ-ಬುದ್ಧಿಶಕ್ತಿ ಇಂದು ಬಹಳಷ್ಟು ಜನಕ್ಕಿಲ್ಲ. ಇದರಿಂದ ಸಾಮಾಜಿಕ ನಾಟಕಗಳು ಜನತೆಯ ಮೇಲೆ ಸಾಕಷ್ಟು ಪರಿಣಾಮ ಮಾಡಿಲ್ಲ.

ನಿಜವಾಗಿ ಸಾಮಾಜಿಕ ನಾಟಕಗಳು ನಮಗೆ ಹೆಚ್ಚು ಪ್ರಯೋಜನ ತಂದುಕೊಡಬಲ್ಲವು. ಸಮಾಜದಲ್ಲಿ ನಿತ್ಯವೂ ಉಂಟಾಗಬಹುದಾದ ಕೊಳೆಯನ್ನು ತೊಳೆದು ಪರಿಷ್ಕರಿಸುವದರಲ್ಲಿ ಸಾಮಾಜಿಕಕ್ಕೆ ಹೆಚ್ಚು ಯಶಸ್ಸು ಇದೆ. ಪ್ರಕೃತ ಪರಿಸ್ಥಿತಿಯ ವಿಚಾರಗಳನ್ನು ಮನಸ್ಸು ಸುಲಭ

ವಾಗಿ ತಿಳಿದುಕೊಳ್ಳುವದು. ಪೌರಾಣಿಕ ವಿಚಾರಗಳಾದರೂ ಆ ಕಾಲ ದಲ್ಲಿ ಅದು ಸಾಮಾಜಿಕವಾಗಿಯೇ ಇದ್ದಿತ್ತು.

ನಮ್ಮಲ್ಲಿ ನಾಟಕಗಳ ಸೃಷ್ಟಿಗೇನು ಅಷ್ಟೇನು ಕೊರತೆಯಾಗಿಲ್ಲ. ಆದರೆ ಅವುಗಳ ರಂಗಭೂಮಿಯು ಕಡೆಗೆ ಹೊರಳಿದಾಗ ವಿಷಾದ ವಾಗುತ್ತದೆ. ನಾಟಕಗಳ ಪರಿಣಾಮ ಪ್ರತಿಬಿಂಬಿಸುವದು ಹೆಚ್ಚಾಗಿ ರಂಗಭೂಮಿಗಳ ಪ್ರದರ್ಶನದಿಂದ. ರಂಗಭೂಮಿಯು ದರ್ಶನದಿಂದ— ನಾಟಕದ ದೃಶ್ಯಗಳೆಲ್ಲ ಸಜೀವವಾಗುವದು. ನಾಟಕದ ಪರಿಣಾಮವೂ ಹೆಚ್ಚು ಯಶಸ್ವಿಯಾಗುವದು.

ಮೊದಲಿಗೆ ರಂಗಭೂಮಿಯು ಯಶಸ್ಸನ್ನು ಬೆಳಗಿಸಿದವರಲ್ಲಿ— ಕರ್ನಾಟಕದಲ್ಲಿ ವರದಾಚಾರ್ಯರಿಗೆ ಹೆಚ್ಚಿನ ಸ್ಥಾನ ಸಿಗಲೇಬೇಕು. "ನೋಡಿದರೆ ವರದಾಚಾರ್ಯರ ನಾಟಕ ನೋಡಬೇಕು" ಎನ್ನುವ ಹೆಸರು ಗಳಿಸಿದ್ದರು. ಅವರ ಕಾಲದಲ್ಲಿ ನಾಟಕದ ನಿರ್ಮಾಣ —ಪ್ರದರ್ಶ ನಗಳು ಒಳ್ಳೇದಾಗಿ ಬೆಳೆಯಿತು. ಆದರೆ ವರದಾಚಾರ್ಯರವರಿಗೆ ದೈವಾನುಕೂಲ ಕಡಿಮೆಯಾಗಿ ಅವರ ಕಂಪೆನಿ ಮುಂದೆ ಬೆಳೆಯಲೇ ಇಲ್ಲ. ನಂತರ ಅಷ್ಟಕ್ಕೂ ನಿಲ್ಲಲಿಲ್ಲ ರಂಗಭೂಮಿಯು ಪ್ರದರ್ಶನ. ಮತ್ತೂ ಹೀನ ಸ್ಥಿತಿಗಿಳಿದು ಹೋಯಿತು. ಗರುಡ ಸದಾಶಿವರಾಯರೂ ನಮ್ಮ ಕನ್ನಡ ಸಾಹಿತ್ಯದ ನಾಟಕ—ರಂಗಭೂಮಿಯು ಸೇವೆಯನ್ನು ಕೆಲಕಾಲ ಸಲ್ಲಿಸಿದರು. ಹೆಚ್ಚಾಗಿ ಆರ್ಥಿಕ ದುಃಸ್ಥಿತಿಯಿಂದ ನಮ್ಮಲ್ಲಿಯ ನಾಟಕ ಕಂಪೆನಿಗಳು ಬೆಳವಣಿಗೆಯಾಗವದಿಲ್ಲ. ಇದರಿಂದ ನಿರ್ಮಾಣ ಹೊಂದಿಕೊಂಡಿದ್ದರೂ ಬಹಳಷ್ಟು ನಾಟಕಗಳು ರಂಗಭೂಮಿಯ ಮುಖಾವಲೋಕನವನ್ನು ಮಾಡುವಷ್ಟು ಭಾಗ್ಯವನ್ನು ಸಹಾ ಪಡೆ ಯುವದಿಲ್ಲ. ಇದಕ್ಕೆ ಕನ್ನಡಿಗರು ಯೋಗ್ಯ ಪರಿಹಾರವನ್ನು ಕೈಕೊಳ್ಳಲೇ ಬೇಕು. ಇಲ್ಲದಿದ್ದರೆ ನಮ್ಮ ನಾಡಿನ ಒಂದು ಸ್ವತಂತ್ರ ಸಂಪ್ರದಾಯ- ಸಂಸ್ಕೃತಿಯಾದ ಈ ನಾಟಕ ಕಲೆಯು ಪೂರ್ಣ ಅವನತಿಗಿಳಿಯುವುದು ರಂಗಭೂಮಿಯು ದುಃಸ್ಥಿತಿಯನ್ನು ಪುನರುಜ್ಜೀವನಗೊಳಿಸಿ-ಅದರ ಮಟ್ಟ ವನ್ನು ಸುಧಾರಿಸಿದರೆ ನಾಟಕದ ಬೆಳವಣಿಗೆ ಸಾಕಷ್ಟು ಆಗಿ ನಮ್ಮ ಜೀವನ ವಿಕಾಸದ ಕಾರ್ಯದಲ್ಲಿ ಒಳ್ಳೇ ಸಹಾಯ ನಮಗೆ ದೊರಕುತ್ತಿತ್ತು.

ನಾಟಕದಲ್ಲಿ ಹೆಜ್ಜೆ ಹೆಜ್ಜೆಗೂ ಉಜ್ವಲ ವಿಚಾರ ತತ್ವಗಳು ತುಂಬಿ ಕೊಂಡಿರಬೇಕು. ನಿಸರ್ಗಕ್ಕೆ ವಿರೋಧವಾಗದಂತೆ ಸಂದರ್ಭ—ಸನ್ನಿವೇಶಗಳು—ಪಾತ್ರಕ್ಕೆ ಹೊಂದಿಕೆಯಾದ ವಿಷಯ—ವಿಚಾರಗಳಿಂದ ನಾಟಕವು ಪರಿಷ್ಕೃತವಾಗಿರಬೇಕು. ಸಮಾಜದಲ್ಲಿ ಸತ್ಯ - ನ್ಯಾಯ - ಪ್ರೇಮ—ಸೌಹಾರ್ದ—ದಯೆ—ಸಹನೆ—ಮುಂತಾದ ಗುಣಗಳನ್ನು ಅಭಿವೃದ್ಧಿಗೊಳಿಸುವಂಥ ಸರ್ವೋತ್ಕೃಷ್ಟ ನಾಟಕಗಳು ನಮಗಿಂದು ಬೇಕು.

ಕಲಾವಂತರು ಮುಂದಾಗಲಿ!

ನಾಟಕ ಕಲೆ ಬೆಳೆದು ನಾಡು ಬೆಳಗಲಿ!

## ಕೊನೆಯ ಮಾತು

ಭಾರತದ ಸಾಹಿತ್ಯ ಮತ್ತು ಕಲೆಗಳ ರಂಗ ಇಷ್ಟು ವಿಶಾಲವಾಗಿ ಅವುಗಳ ಕ್ರಿಯೆ ಇಷ್ಟು ಮಹತ್ವದ್ದಾಗಿದ್ದರೂ, ನಮ್ಮಲ್ಲಿ ಕೆಲ ಮಟ್ಟಿಗಾದರೂ ಅವುಗಳ ಸೇವೆ ನಡೆಯುತ್ತಿದ್ದರೂ ಅವುಗಳ ಪ್ರಯೋಜನ ನಮಗೆ ಸಾಕಷ್ಟು . ದೊರಕದಿದ್ದುದು ವಿಷಾದಕರ. ಇದಕ್ಕೆ ಇಂದು ಹೆಚ್ಚಾಗಿ ಸಾಹಿತ್ಯ—ಕಲೆಗಳ ವಿಷಯ ಮಾತಿನಲ್ಲೇ ಉಳಿದು ಕೃತಿಯಲ್ಲಿಳಿಯದಿದ್ದುದೇ ಮುಖ್ಯ ಕಾರಣ. ಬೇಸರ ನಿವಾರಣೆಗಾಗಿ ಓದುವದು—ವಿನೋದಕ್ಕಾಗಿ ಕಲೆಗಳನ್ನು ನೋಡುವದು—ಇದೇ ಜನತೆಯ ಸ್ವಭಾವವಾಗಿ ಬಿಟ್ಟಿದೆ. ಇದರಿಂದ ನಮ್ಮ ಜೀವನಕ್ಕೆ ಸಾಹಿತ್ಯ ಕಲೆಗಳಿಂದ ಪ್ರಯೋಜನ ದೊರಕದಾಗಿದೆ. ಒಂದೊಮ್ಮೆ ಅಹಿತವಾಗುವ ಭಯವೂ ಬರಬಹುದು. ಇದಕ್ಕೆಲ್ಲ ನಾವೇ ಹೊಣೆಗಾರರು. ಇಂದೊಬ್ಬ ಕಲಾಜೀವಿಯು ... ಮನ ಪಾತ್ರ ವಹಿಸಿ—ರಾಮನ ಸತ್ಯತೆ— ... ಮುಂತಾದ ಸದ್ಗುಣಗಳನ್ನು ಪ್ರದರ್ಶಿಸಿ ... ಜೀವನದಲ್ಲಿ ಇಲ್ಲದಿದ್ದರೆ ಅದರಿಂದ ... ಂತಾಯಿತು? ಇಂಥ ಸ್ವಭಾವವನ್ನೆಲ್ಲ ... ಸಾಹಿತ್ಯ ಕಲೆಗಳನ್ನು ನಮ್ಮ ಜೀವನ ... ಅಳವಡಿಸಿಕೊಂಡರೆ ಭಾರತದ ಜನಾಂಗ ಸುಸಂಸ್ಕೃತಿಯಿಂದೊಡಗೂಡುವದು. ಜೀವನ ಸುಖಶಾಂತಿಯಿಂದ ನಲಿಯುವದು. ಶಾಂತಿ! ಶಾಂತಿ!! ಶಾಂತಿ!!!

Printed & Publised by K. H. Shetty at the Navayuga Press. Udipi